WPP-47

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – **IV-A** | ಬೆಂಗಳೂರು, ಮಂಗಳವಾರ, ಮಾರ್ಚ್ ೨೭, ೨೦೧೨ (ಚೈತ್ರ ೭, ಶಕ ವರ್ಷ ೧೯೩೪) | ನಂ. ೨೧೮ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/5/Bill/2012, Bangalore, Dated: 27.3.2012**

The following Bill was introduced in Legislative Assembly on 27.3.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿಮೂರನೇ ಅಧಿವೇಶನ**

## ಕರ್ನಾಟಕ ಧನವಿನಿಯೋಗ ವಿಧೇಯಕ, 2012

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 5)**

2011–12ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಅಧಿಕ ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ವಿಧೇಯಕ.

2011–12ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ:

ಇದು ಭಾರತ ಗಣರಾಜ್ಯದ ಅರವತ್ತಮೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗಲಿ.

**1. ಸಂಕ್ಷಿಪ್ತ ಹೆಸರು:** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ ಅಧಿನಿಯಮ, 2012 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ 2011–12ನೇ ಹಣಕಾಸು ವರ್ಷಕ್ಕಾಗಿ 617770.39 ಲಕ್ಷ ರೂಪಾಯಿಗಳ ನೀಡಿಕೆ:** ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ಸೇವೆಗಳ ಸಂಬಂಧದಲ್ಲಿ 2011–12ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ ಆರು ಸಾವಿರದ ಒಂದು ನೂರ ಎಪ್ಪತ್ತೇಳು ಕೋಟಿ ಎಪ್ಪತ್ತು ಲಕ್ಷದ ಮೂವತ್ತೊಂಬತ್ತು ಸಾವಿರ ರೂಪಾಯಿಗಳು ಮೀರದಷ್ಟು ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು ಮತ್ತು ಉಪಯೋಗಿಸತಕ್ಕದ್ದು.

**3. ಧನವಿನಿಯೋಗ:** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

**ಅನುಸೂಚಿ**

**(2 ಮತ್ತು 3ನೇ ಪ್ರಕರಣಗಳನ್ನು ನೋಡಿ)**

**(₹. ಲಕ್ಷಗಳಲ್ಲಿ)**

| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ಮೀರದ ಮೊಬಲಗು | | ಒಟ್ಟು |
|---|---|---|---|---|---|
| | | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತನಿಧಿಯಿಂದ ಪ್ರಭೃತವಾದುದನ್ನು | |
| 1 | 2 | | 3 | 4 | 5 |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 2,460.17 | ... | 2,460.17 |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 4,962.12 | ... | 4,962.12 |
| | | ಬಂಡವಾಳ | 908.00 | ... | 908.00 |
| 03 | ಆರ್ಥಿಕ | ರಾಜಸ್ವ | 1,05,000.00 | ... | 1,05,000.00 |
| | | ಬಂಡವಾಳ | 15,200.00 | ... | 15,200.00 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ರಾಜಸ್ವ | 1,500.90 | 273.83 | 1,774.73 |
| | | | | | |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 7,746.13 | ... | 7,746.13 |
| | | ಬಂಡವಾಳ | 2,900.00 | ... | 2,900.00 |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ | ಬಂಡವಾಳ | 200.00 | ... | 200.00 |
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 15,355.46 | ... | 15,355.46 |
| | | ಬಂಡವಾಳ | 67,836.72 | ... | 67.836.72 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 833.31 | ... | 833.31 |
| 09 | ಸಹಕಾರ | ರಾಜಸ್ವ | 35,530.00 | ... | 35,530.00 |
| | | ಬಂಡವಾಳ | 90.72 | ... | 90.72 |
| 10 | ಸಮಾಜ ಕಲ್ಯಾಣ | ರಾಜಸ್ವ | 6,929.11 | ... | 6,929.11 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 51,448.98 | ... | 51,448.98 |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 712.61 | ... | 712.61 |
| | | ಬಂಡವಾಳ | 98.00 | ... | 98.00 |
| 13 | ಆಹಾರ ಮತ್ತು ನಾಗರೀಕ ಸರಬರಾಜು | ರಾಜಸ್ವ | 20.00 | ... | 20.00 |
| 14 | ಕಂದಾಯ | ರಾಜಸ್ವ | 9,654.78 | ... | 9,654.78 |
| 15 | ಮಾಹಿತಿ ತಂತ್ರಜ್ಞಾನ | ಬಂಡವಾಳ | 88.00 | ... | 88.00 |
| 16 | ವಸತಿ | ರಾಜಸ್ವ | 5,567.71 | ... | 5,567.71 |
| 17 | ಶಿಕ್ಷಣ | ರಾಜಸ್ವ | 12,042.57 | ... | 12,042.57 |
| | | ಬಂಡವಾಳ | 2,000.00 | ... | 2,000.00 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 21,187.15 | ... | 21,187.15 |
| | | ಬಂಡವಾಳ | 2,735.81 | ... | 2,735.81 |

| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ಮೀರದ ಮೊಬಲಗು | | ಒಟ್ಟು |
|---|---|---|---|---|---|
| | | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತನಿಧಿಯಿಂದ ಪ್ರಭೃತವಾದುದನ್ನು | |
| **1** | **2** | | **3** | **4** | **5** |
| 19 | ನಗರಾಭಿವೃದ್ಧಿ | ರಾಜಸ್ವ | 3,490.00 | ... | 3,490.00 |
| | | ಬಂಡವಾಳ | 9,572.00 | ... | 9,572.00 |
| 20 | ಲೋಕೋಪಯೋಗಿ | ರಾಜಸ್ವ | 16,178.71 | ... | 16,178.71 |
| | | ಬಂಡವಾಳ | 76,082.00 | ... | 76,082.00 |
| 21 | ಜಲಸಂಪನ್ಮೂಲ | ರಾಜಸ್ವ | 4,527.68 | ... | 4,527.68 |
| | | ಬಂಡವಾಳ | 4,546.00 | ... | 4,546.00 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ | ರಾಜಸ್ವ | 2,623.93 | ... | 2,623.93 |
| | | ಬಂಡವಾಳ | 652.50 | ... | 652.50 |
| 23 | ಕಾರ್ಮಿಕ | ರಾಜಸ್ವ | 11.00 | ... | 11.00 |
| | | ಬಂಡವಾಳ | 912.00 | ... | 912.00 |
| 24 | ಇಂಧನ | ರಾಜಸ್ವ | 75,000.00 | ... | 75,000.00 |
| | | ಬಂಡವಾಳ | 50,000.00 | ... | 50,000.00 |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ | 189.14 | ... | 189.14 |
| | | | | ... | |
| 27 | ಕಾನೂನು | ರಾಜಸ್ವ | 325.35 | ... | 325.35 |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ | ರಾಜಸ್ವ | 378.00 | ... | 378.00 |
| | | | | ... | |
| | **ಮೊತ್ತ** | **ರಾಜಸ್ವ** | **3,83,674.81** | **273.83** | **3,83,948.64** |
| | | **ಬಂಡವಾಳ** | **2,33,821.75** | | **2,33,821.75** |
| | **ಒಟ್ಟು ಮೊತ್ತ** | | **6,17,496.56** | **273.83** | **6,17,770.39** |

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

2011–12ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ರಾಜ್ಯದ ಸಂಚಿತ ನಿಧಿಯೊಳಗಿನಿಂದ ವಿನಿಯೋಗಿಸಲು ಭಾರತ ಸಂವಿಧಾನದ 205ನೇ (1) (ಎ) ಅನುಚ್ಛೇದದ ಉಪಬಂಧಗಳಿಗನುಸಾರವಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

**ಡಿ.ವಿ. ಸದಾನಂದ ಗೌಡ**
ಮುಖ್ಯಮಂತ್ರಿಗಳು ಹಾಗೂ
ಹಣಕಾಸು ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

# KARNATAKA LEGISLATIVE ASSEMBLY

## THIRTEENTH LEGISLATIVE ASSEMBLY

## THIRTEENTH SESSION

# THE KARNATAKA APPROPRIATION BILL, 2012

## (L.A. Bill No. 5 of 2012)

A Bill to authorize payment and appropriation of certain sums from and out of the Consolidated Fund of the State of Karnataka for the Services of the Financial Year 2011-12

Whereas it is expedient to authorize payment and appropriation of certain further sums from and out of the Consolidated fund of the State for the services of the Financial Year 2011-12.

Be it enacted by the Karnataka State Legislature in the Sixty Third Year of the Republic of India as follows :-

**1. Short Title :** This Act may be called the Karnataka Appropriation Act, 2012.

**2. Issue of Rupees 617770.39** Lakhs out of the Consolidated Fund of the State of Karnataka for the Financial year 2011-12: From and out of the Consolidated Fund of the State of Karnataka, there may be paid and applied sums not exceeding those specified in column 5 of the Schedule amounting in the aggregate to the sum of Six Thousand one Hundred Seventy seven crores Seventy Lakhs and Thirty nine Thousand rupees only towards defraying the several charges which will come in the course of payment during the Financial Year 2011-12 in respect of the services specified in column 2 of the Schedule.

**3. Appropriation. -** The sums authorized to be paid and applied from and out of the Consolidated Fund of the State by this Act shall be appropriated for the services and purposes expressed in the Schedule in relation to the said year.

**SCHEDULE**
**(See Section 2 and 3)**

**(₹. in Lakhs)**

| Demand No. | Service & Purpose | | Sums not exceeding | | Total |
|---|---|---|---|---|---|
| | | | voted by the Legislative Assembly | Charged on the consolidated Fund | |
| 1 | 2 | | 3 | 4 | 5 |
| 01 | Agriculture & Horticulture | Revenue | 2,460.17 | ... | 2,460.17 |
| 02 | Animal Husbandry & Fisheries | Revenue | 4,962.12 | ... | 4,962.12 |
| | | Capital | 908.00 | ... | 908.00 |
| 03 | Finance | Revenue | 1,05,000.00 | ... | 1,05,000.00 |
| | | Capital | 15,200.00 | ... | 15,200.00 |
| 04 | Department of Personnel & Administrative Reforms | Revenue | 1,500.90 | 273.83 | 1,774.73 |
| | | | | | |
| 05 | Home & Transport | Revenue | 7,746.13 | ... | 7,746.13 |
| | | Capital | 2,900.00 | ... | 2,900.00 |
| 06 | Infrastructure Development | Capital | 200.00 | ... | 200.00 |
| 07 | Rural Development & Panchayath Raj | Revenue | 15,355.46 | ... | 15,355.46 |
| | | Capital | 67,836.72 | ... | 67,836.72 |
| 08 | Forest, Ecology & Environment | Revenue | 833.31 | ... | 833.31 |

| Demand No. | Service & Purpose | | Sums not exceeding voted by the Legislative Assembly | Sums not exceeding Charged on the consolidated Fund | Total |
|---|---|---|---|---|---|
| 1 | 2 | | 3 | 4 | 5 |
| 09 | Co - operation | Revenue | 35,530.00 | ... | 35,530.00 |
| | | Capital | 90.72 | ... | 90.72 |
| 10 | Social Welfare | Revenue | 6,929.11 | ... | 6,929.11 |
| 11 | Women & Child Development | Revenue | 51,448.98 | ... | 51,448.98 |
| 12 | Information, Tourism & Youth Services | Revenue | 712.61 | ... | 712.61 |
| | | Capital | 98.00 | ... | 98.00 |
| 13 | Food & Civil Supplies | Revenue | 20.00 | ... | 20.00 |
| 14 | Revenue | Revenue | 9,654.78 | ... | 9,654.78 |
| 15 | Information Technology | Capital | 88.00 | ... | 88.00 |
| 16 | Housing | Revenue | 5,567.71 | ... | 5,567.71 |
| 17 | Education | Revenue | 12,042.57 | ... | 12,042.57 |
| | | Capital | 2,000.00 | ... | 2,000.00 |
| 18 | Commerce and Industries | Revenue | 21,187.15 | ... | 21,187.15 |
| | | Capital | 2,735.81 | ... | 2,735.81 |
| 19 | Urban Development | Revenue | 3,490.00 | ... | 3,490.00 |
| | | Capital | 9,572.00 | ... | 9,572.00 |
| 20 | Public Works | Revenue | 16,178.71 | ... | 16,178.71 |
| | | Capital | 76,082.00 | ... | 76,082.00 |
| 21 | Water Resources | Revenue | 4,527.68 | ... | 4,527.68 |
| | | Capital | 4,546.00 | ... | 4,546.00 |
| 22 | Health and Family Welfare | Revenue | 2,623.93 | ... | 2,623.93 |
| | | Capital | 652.50 | ... | 652.50 |
| 23 | Labour | Revenue | 11.00 | ... | 11.00 |
| | | Capital | 912.00 | ... | 912.00 |
| 24 | Energy | Revenue | 75,000.00 | ... | 75,000.00 |
| | | Capital | 50,000.00 | ... | 50,000.00 |
| 26 | Planning, Statistics, Science and Technology | Revenue | 189.14 | ... | 189.14 |
| | | | | | |
| 27 | Law | Revenue | 325.35 | ... | 325.35 |
| 28 | Parliamentary Affairs and Legislation | Revenue | 378.00 | ... | 378.00 |
| | | | | | |
| | **TOTAL** | **Revenue** | **3,83,674.81** | **273.83** | **3,83,948.64** |
| | | **Capital** | **2,33,821.75** | **...** | **2,33,821.75** |
| | **GRAND TOTAL** | | **6,17,496.56** | **273.83** | **6,17,770.39** |

## STATEMENT OF OBJECTS AND REASONS

This Bill is introduced in pursuance of the provisions of Article 205 (1) (a) of the Constitution of India to provide for the appropriation out of the Consolidated Fund of the State towards defraying the several charges which will come in course of payment during the part of the Financial Year 2011-12.

**D.V. SADANANDA GOWDA**
Chief Minister &
Minister for Finance

**P. OMPRAKASHA**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – V | ಬೆಂಗಳೂರು, ಬುಧವಾರ, ಮಾರ್ಚ್ ೨೮, ೨೦೧೨ (ಚೈತ್ರ ೮, ಶಕ ವರ್ಷ ೧೯೩೪) | ನಂ. ೨೨೧ |
|---|---|---|

## ಕರ್ನಾಟಕ ವಿಧಾನ ಸಭೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆಃ ಕವಿಸಸ/ಆ–1/58/ದ.ಹು.ನೇ.ನೇ./2012, ಬೆಂಗಳೂರು, ದಿನಾಂಕಃ 28.03.2012**

**ವಿಷಯಃ** ಕರ್ನಾಟಕ ವಿಧಾನ ಸಭೆ ಸಚಿವಾಲಯದಲ್ಲಿ ದಲಾಯತ್ ಹುದ್ದೆಗಳನ್ನು ನೇರ ನೇಮಕಾತಿಯ ಮೂಲಕ ಭರ್ತಿ ಮಾಡುವ ಬಗ್ಗೆ.

ಕರ್ನಾಟಕ ವಿಧಾನ ಸಭೆ ಸಚಿವಾಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 2003 ಹಾಗೂ ತಿದ್ದುಪಡಿ ನಿಯಮ 2009ರಡಿಯಲ್ಲಿ ಕರ್ನಾಟಕ ವಿಧಾನಸಭೆ ಸಚಿವಾಲಯದ ದಲಾಯತ್ ಹುದ್ದೆಗಳಿಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಹುದ್ದೆಗಳ ವಿವರಗಳು ಈ ಕೆಳಕಂಡಂತಿರುತ್ತವೆ.

**ಹುದ್ದೆಯ ಹೆಸರು** : **ದಲಾಯತ್**

**ಹುದ್ದೆಗಳ ಸಂಖ್ಯೆ** : **14 ಹುದ್ದೆಗಳು**

**ವೇತನ ಶ್ರೇಣಿ** : **ರೂ. 4800–100–6000–125–6500–150–7100–175–7275**

| | ಮೀಸಲಾತಿ ವರ್ಗೀಕರಣ | ಸಮತಳ ಮೀಸಲಾತಿ ವರ್ಗೀಕರಣ | | | | | | |
|---|---|---|---|---|---|---|---|---|
| ಕ್ರ. ಸಂ. | ಮೀಸಲಾತಿ | ಸಾಮಾನ್ಯ ಅರ್ಹತೆ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲ ಅಭ್ಯರ್ಥಿ | ಮಹಿಳಾ ಅಭ್ಯರ್ಥಿ | ಮಾಜಿ ಸೈನಿಕ | ಕನ್ನಡ ಮಾಧ್ಯಮ ಅಭ್ಯರ್ಥಿ | ಖಾಲಿ ಇರುವ ಒಟ್ಟು ಹುದ್ದೆಗಳ ಸಂಖ್ಯೆ |
| 1. | ಪ.ಜಾ. | – | –– | –– | 01 | –– | 01 | 02 |
| 2. | ಸಾಮಾನ್ಯ | 01 | 02 | –– | 02 | 01 | –– | 06 |
| 3. | ಪ್ರವರ್ಗ–I | –– | –– | 01 | –– | | –– | 01 |
| 4. | II ಎ | –– | –– | –– | 01 | –– | 01 | 02 |
| 5. | IIಬಿ | –– | –– | 01 | –– | –– | –– | 01 |
| 6. | III ಎ | –– | –– | 01 | –– | –– | –– | 01 |
| 7. | III ಬಿ | –– | –– | –– | 01 | –– | –– | 01 |

1. **ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 21.04.2012**
2. ಅರ್ಜಿ ಸಲ್ಲಿಸಬೇಕಾದ ವಿಳಾಸಃ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ, ಅಂಚೆ ಪೆಟ್ಟಿಗೆ ಸಂಖ್ಯೆಃ 5074, ಮೊದಲನೆ ಮಹಡಿ, ವಿಧಾನ ಸೌಧ, ಬೆಂಗಳೂರು–560 233.

**3.** ಕರ್ನಾಟಕ ವಿಧಾನ ಸಭೆ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಾವಳಿಗಳನುಸಾರ ಮೇಲ್ಕಂಡ ಹುದ್ದೆಗಳ ಭರ್ತಿಗಾಗಿ ಅರ್ಹತೆಯುಳ್ಳ ಅಭ್ಯರ್ಥಿಗಳು ಅರ್ಜಿ ನಮೂನೆ–1ರ ದ್ವಿಪ್ರತಿಯಲ್ಲಿ ಅರ್ಜಿಗಳನ್ನು ಸರ್ಕಾರಿ ಪುಸ್ತಕ ಮಳಿಗೆಯಿಂದ ಪಡೆದು ವಿಧಾನಸಭೆ ಸಚಿವಾಲಯಕ್ಕೆ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಸಲ್ಲಿಸಬೇಕು. (ಅರ್ಜಿ ನಮೂನೆಯು ಸರ್ಕಾರಿ ಮುದ್ರಣಾಲಯದಲ್ಲಿ ದೊರೆಯುವುದು)

**4.** **ವಿದ್ಯಾರ್ಹತೆಃ** ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ಪ್ರಕಾರ ಅಭ್ಯರ್ಥಿಗಳು ನೇರ ನೇಮಕಾತಿಗೆ ಅರ್ಹತೆಯನ್ನು ಪಡೆದಿರಬೇಕು ಹಾಗೂ ಅವನು/ಅವಳು ಕೆಳಗೆ ತಿಳಿಸಿರುವ ವಿದ್ಯಾರ್ಹತೆಯನ್ನು ಹೊಂದಿರತಕ್ಕದ್ದು.

| ಕ್ರ. ಸಂ. | ಹುದ್ದೆಯ ಹೆಸರು | ವಿದ್ಯಾರ್ಹತೆ |
|---|---|---|
| 1 | **ದಲಾಯತ್** | 7ನೇ ತರಗತಿಯಲ್ಲಿ ಉತ್ತೀರ್ಣರಾಗಿರ ಬೇಕು. |

**5.** **ವಯೋಮಿತಿಃ** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

**ಗರಿಷ್ಠ ವಯೋಮಿತಿಃ–**

| | | |
|---|---|---|
| ಸಾಮಾನ್ಯ ವರ್ಗ | ಃ | 35 ವರ್ಷ |
| ಪ್ರವರ್ಗ IIಎ, IIಬಿ, IIIಎ ಮತ್ತು IIIಬಿ | ಃ | 38 ವರ್ಷ |
| ಪ.ಜಾ/ಪ.ಪಂ/ಪ್ರವರ್ಗ–I | ಃ | 40 ವರ್ಷ |

**6.** ಸರ್ಕಾರಿ ಇಲಾಖೆಗಳಲ್ಲಿ ಈಗಾಗಲೇ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿಗಳನ್ನು ತಮ್ಮ ನೇಮಕಾತಿ ಪ್ರಾಧಿಕಾರದ ಮೂಲಕವೇ ನಿಗದಿತ ದಿನಾಂಕದೊಳಗೆ ಸಲ್ಲಿಸಬೇಕು.

**7.** ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ಪ್ರಕಾರ, ರಾಜ್ಯ ಸಿವಿಲ್ ಸೇವೆಗಳಲ್ಲಿ ಹುದ್ದೆಗಳಿಗೆ ನೇಮಕಾತಿ ಹೊಂದಲು ಅರ್ಹತೆ ಹೊಂದಿರುವ ಅಭ್ಯರ್ಥಿಗಳು ಮಾತ್ರ ನೇಮಕಾತಿಗೆ ಅರ್ಹರಾಗಿರುತ್ತಾರೆ.

**8.** (1) ಆಯ್ಕೆಯಾದ ಯಾವುದೇ ಅಭ್ಯರ್ಥಿಯು, ನೇಮಕಾತಿ ಪ್ರಾಧಿಕಾರಕ್ಕೆ ಅವನು/ಅವಳು ನೇಮಿಸಿರುವ ಕೆಲಸಕ್ಕೆ ದೈಹಿಕವಾಗಿ ಹಾಗೂ ಮಾನಸಿಕವಾಗಿ ಯೋಗ್ಯವೆನಿಸಿದ ಹೊರತು ಅವನನ್ನು/ಅವಳನ್ನು ಆ ಹುದ್ದೆಗೆ ನೇಮಿಸಲಾಗುವುದಿಲ್ಲ.

(2) ಸಕ್ಷಮ ನೇಮಕಾತಿ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ನೇಮಕಾತಿಗೆ ಅರ್ಹರಾಗಿರುವುದಿಲ್ಲ.

**9.** ಯಾವುದೇ ವ್ಯಕ್ತಿಯು ತನ್ನ ಉಮೇದುವಾರಿಕೆ ಬಗ್ಗೆ ಅಧಿಕಾರಿಗಳು ಮತ್ತು ಅಧಿಕಾರೇತರರುಗಳಿಂದ ಯಾವುದೇ ರೀತಿಯ ಒತ್ತಡ ತಂದಲ್ಲಿ ಸದರಿ ಹುದ್ದೆಯ ನೇಮಕಾತಿಗೆ ಅರ್ಹನಾಗುವುದಿಲ್ಲ.

**10.** **ಶುಲ್ಕಃ** ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಪ್ರವರ್ಗ–I ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕ ಇರುವುದಿಲ್ಲ. ಉಳಿದ, ಸಾಮಾನ್ಯ ವರ್ಗದ ಮತ್ತು ಇತರೆ ಹಿಂದುಳಿದ ವರ್ಗದ ಅಭ್ಯರ್ಥಿಗಳು ಕ್ರಾಸ್ ಮಾಡಿದ ರೂ.25.00ರ ಇಂಡಿಯನ್ ಪೋಸ್ಟಲ್ ಆರ್ಡರ್‌ನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ 15 ದಿನಗಳೊಳಗಿರುವಂತೆ ಖರೀದಿಸಿ, ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ, ಮೊದಲನೆ ಮಹಡಿ, ವಿಧಾನಸೌಧ, ಬೆಂಗಳೂರು–560 233 ಈ ವಿಳಾಸಕ್ಕೆ ಪಾವತಿ ಮಾಡಬೇಕು. ಅರ್ಜಿ ಶುಲ್ಕವನ್ನು ಒಮ್ಮೆ ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ.

**11.** ಅಭ್ಯರ್ಥಿಗಳು ಅರ್ಜಿಯೊಂದಿಗೆ ಈ ಕೆಳಗೆ ತಿಳಿಸಲಾಗಿರುವ ದಾಖಲೆಗಳ ಜೆರಾಕ್ಸ್ ಪ್ರತಿಗಳನ್ನು ದ್ವಿಪ್ರತಿಗಳಲ್ಲಿ ತಪ್ಪದೇ ಲಗತ್ತಿಸಬೇಕು.

(ಅ) ಹುಟ್ಟಿದ ತಾರೀಖಿಗೆ ಆಧಾರದ ದಾಖಲೆ ಪ್ರತಿ.

(ಆ) ಹುದ್ದೆಗೆ ಸೂಚಿಸಲಾಗಿರುವ ವಿದ್ಯಾರ್ಹತೆಗೆ ಸಂಬಂಧಿಸಿದ ಪತ್ರದ ನಕಲು ಪ್ರತಿ (ಅಂಕಪಟ್ಟಿಯ ನಕಲು ಪ್ರತಿಯ ಸಮೇತ).

(ಇ) ಅರ್ಜಿ ನಮೂನೆಯಲ್ಲಿ ನಿಗದಿಪಡಿಸಿರುವಂತೆ ನಡತೆಯ (Conduct) ಬಗ್ಗೆ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ಇತ್ತೀಚಿನ ಪ್ರಮಾಣ ಪತ್ರಗಳು.

(ಈ) ಜಾತಿ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಸರ್ಕಾರದಿಂದ ನಿಗದಿಪಡಿಸಿರುವ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

(ಉ) 1 ರಿಂದ 7ನೇ ತರಗತಿಯವರೆಗೆ ಕನ್ನಡ / ಗ್ರಾಮಾಂತರ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿದ್ದಕ್ಕಾಗಿ ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಪಡೆದ ದೃಢೀಕರಣ ಪತ್ರ.

**ಸೂಚನೆಃ– ಅಭ್ಯರ್ಥಿಗಳು ಮೂಲ ಪ್ರಮಾಣ ಪತ್ರಗಳನ್ನು ಲಗತ್ತಿಸಬಾರದು.**

**12.** ಅರ್ಜಿಗಳನ್ನು ನಮೂನೆ 1 ರ ದ್ವಿಪ್ರತಿಯಲ್ಲಿ ಅಗತ್ಯವುಳ್ಳ ದಾಖಲೆಗಳನ್ನು ಲಗತ್ತಿಸಿ, ಕೊನೆಯ ದಿನಾಂಕ ಃ 21.04.2012 ರಂದು ಸಂಜೆ 4–00 ಗಂಟೆಯ ಒಳಗಾಗಿ ಖುದ್ದಾಗಿ ಅಥವಾ ಅಂಚೆಯ ಮೂಲಕ ತಲುಪಿಸತಕ್ಕದ್ದು, ಸದರಿ ದಿನಾಂಕವು ಸಾರ್ವಜನಿಕ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನದಂದು ಅರ್ಜಿಯನ್ನು ಸಲ್ಲಿಸತಕ್ಕದ್ದು.

**13.** ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿ 2003ರ ರೀತ್ಯಾ ಹುದ್ದೆಗಳ ಆಯ್ಕೆ ಪ್ರಕ್ರಿಯೆಯ ಕಾರ್ಯ ವಿಧಾನವನ್ನು ನಿಗದಿಪಡಿಸುವ ಅಧಿಕಾರ ಮಾನ್ಯ ಸಭಾಧ್ಯಕ್ಷರವರಿಗೆ ಇರುತ್ತದೆ.

**ವಿಶೇಷ ಸೂಚನೆ ಃ**

1. **ಅರ್ಜಿಗಳ ಮೇಲೆ ಹುದ್ದೆಯ ಹೆಸರನ್ನು ಹಾಗೂ ಅರ್ಜಿದಾರರ ಹೆಸರು, ತಂದೆಯ ಹೆಸರು ಮತ್ತು ಸರಿಯಾದ ವಿಳಾಸವನ್ನು ದಪ್ಪ ಅಕ್ಷರಗಳಲ್ಲಿ ನಮೂದಿಸತಕ್ಕದ್ದು.**
2. **ಅರ್ಜಿಯನ್ನು ಸಲ್ಲಿಸಲು ನೀಡಿರುವ ಕಾಲಾವಧಿಯು ಸರ್ಕಾರಿ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಸೇರಿದಂತೆ ಎಲ್ಲಾ ಅಭ್ಯರ್ಥಿಗಳಿಗೂ ಅನ್ವಯವಾಗುವುದು.**
3. **ಅಗತ್ಯ ಪ್ರಮಾಣ ಪತ್ರಗಳನ್ನು ಲಗತ್ತಿಸದೆ ಇರುವ, ಲೋಪ/ಅಪೂರ್ಣ ಅರ್ಜಿಗಳನ್ನು ಹಾಗೂ ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**
4. **ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಿದ ನಂತರ ಆ ಸಂಬಂಧ ಯಾವು ದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.**

ಸಭಾಧ್ಯಕ್ಷರ ಆದೇಶಾನುಸಾರ,

**ಕೆ. ನೂರ್ ಮಹಮದ್**
ಉಪ ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆಯ ಸಚಿವಾಲಯ

# ವಿಶೇಷ ಪತ್ರಿಕೆ



| ಭಾಗ – IV-A | ಬೆಂಗಳೂರು, ಬುಧವಾರ, ಮಾರ್ಚ್ ೨೮, ೨೦೧೨ (ಚೈತ್ರ ೮, ಶಕ ವರ್ಷ ೧೯೩೪) | ನಂ. ೨೨೨ |
|---|---|---|



## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 26 ಎಸ್‌ಎಂಆರ್ 2011, ಬೆಂಗಳೂರು, ದಿನಾಂಕ: 27.03.2012**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 ಇದನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕೆ ದಿನಾಂಕ 25–02–2012 ರ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 26 ಎಸ್‌ಎಂಆರ್ 2011 ರಲ್ಲಿ ಪ್ರಕಟಿಸಿರುವ ಈ ಮುಂದಿನ ನಿಯಮಗಳ ಕರಡನ್ನು ಅಧಿಕೃತ ರಾಜ್ಯಪತ್ರದಲ್ಲಿ ಇದರ ಪ್ರಕಟಣೆಯ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ ದಿನಾಂಕ: 27–02–2012 ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ IV–ಎ, ಸಂಖ್ಯೆ: 139 ರಲ್ಲಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ 1978 (1990 ರ ಕರ್ನಾಟಕ ಅಧಿನಿಯಮ 14)ರ 3 ನೇ ಪ್ರಕರಣದ (2) ನೇ ಉಪ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ;

ಮತ್ತು ಸದರಿ ರಾಜ್ಯ ಪತ್ರವು ದಿನಾಂಕ: 27.02.2012 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡಿನ ಮೇಲೆ ಯಾವುದೇ ಆಕ್ಷೇಪಣೆಗಳು/ಸಲಹೆಗಳು ರಾಜ್ಯ ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ.

ಆದ್ದರಿಂದ, ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ 1978 (1990 ರ ಕರ್ನಾಟಕ ಅಧಿನಿಯಮ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1) ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಕೆಳಕಂಡ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

1. **ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) (ತಿದ್ದುಪಡಿ) ನಿಯಮಗಳು, 2012 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ನಿಯಮ 2 ರ ತಿದ್ದುಪಡಿ:–** ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 ರ ನಿಯಮ 2 ರ `ವಿವರಣೆ`ಯ ಖಂಡ (ii) ರಲ್ಲಿರುವ ``ನಾಲ್ಕು ಸಾವಿರ ರೂಪಾಯಿಗಳು`` ಎಂಬ ಪದಗಳ ಬದಲಿಗೆ ``ಆರು ಸಾವಿರ ರೂಪಾಯಿಗಳು`` ಎಂಬ ಪದಗಳನ್ನು ಪ್ರತಿಸ್ಥಾಪಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ನಾಗೇಶ್ ಪಾಟಕ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು).

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 26 SMR 2011, Bangalore, dated: 27.03.2012

Whereas the draft of the following rules further to amend the Karnataka Government Servants' (Medical Attendance) Rules, 1963 was published as required by sub-section (2) of Section 3 of the Karnataka State Civil Services Act, 1978 (Karnataka Act 14 of 1990) in Notification No. DPAR 26 SMR 2011 dated 25-02-2012 in Part IV-A, No. 139, of the Karnataka Extraordinary Gazette dated 27.02.2012 inviting objections/suggestions from the persons likely to be affected thereby within 15 days from the date of its publication in the official Gazette.

And whereas the said Gazette was made available to the public on 27-02-2012.

And, whereas no objections / suggestions have been received by the State Government on the said draft.

Now, therefore, in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rules, namely :-

**RULES**

1. **Title and commencement**:- (1) These rules may be called the Karnataka Government Servants' (Medical Attendance) (Amendment) Rules, 2012.

(2) They shall come into force from the date of their publication in the official Gazette.

2. **Amendment of rule 2**:- In the Karnataka Government Servants' (Medical Attendance) Rules, 1963, in rule 2, in `Explanation`, in clause (ii), for the words "four thousand rupees", the words "six thousand rupees" shall be substituted.

By Order and in the name of the Governor of Karnataka,

**D. NAGESH PHATAK**
Under Secretary to Government,
Department of Personnel and Administrative Reforms
(Service Rules).

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಗುರುವಾರ, ಮಾರ್ಚ್ ೨೯, ೨೦೧೨ (ಚೈತ್ರ ೯, ಶಕ ವರ್ಷ ೧೯೩೪) | ನಂ. ೨೨೪ |
|---|---|---|


## KARNATAKA ELECTRICITY REGULATORY COMMISSION

No. 9/2, 6th & 7th Floors, Mahalaxmi Chambers, M.G. Road, Bangalore-560 001

**NOTIFICATION**

**No. Y/01/12, Bangalore, Dated 29.03. 2012**

KERC vide its notification dated 01.02.2012 had notified the pooled cost of power purchase under Clause 7(c) of the KERC (Procurement of Energy From Renewable Sources) (First Amendment) Regulations, 2011 at Rs. 2.73/unit for the Financial Year 2012, which comes to an end on 31.03.2012. Since it would take sometime for finalizing the power purchase costs for FY 12, the Commission as an interim measure continues the pooled cost at Rs. 2.73/unit for FY 13 also. Any variation in pooled cost based on actual power purchase cost of FY 12 as may be notified by the Commission in the near future shall be adjusted in the future bills. Hence, in exercise of the powers conferred under Clause 7(c) of the KERC (Procurement of Energy From Renewable Sources)(First Amendment) Regulations, 2011, for the purpose of Renewable Energy Certificates [REC], the Karnataka Electricity Regulatory Commission hereby continues the pooled cost at Rs. 2.73/unit till 30th June 2012 or further notification, whichever is earlier.

**Approved by the Commission**

**Secretary**


# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಗುರುವಾರ, ಮಾರ್ಚ್ ೨೯, ೨೦೧೨ (ಚೈತ್ರ ೯, ಶಕ ವರ್ಷ ೧೯೩೪) | ನಂ. ೨೨೫ |
|---|---|---|


## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 47 ಸೇನಿಸಿ 2008, ಬೆಂಗಳೂರು, ದಿನಾಂಕ: 29/03/2012**

ಕರ್ನಾಟಕ ರಾಜ್ಯ ನಾಗರಿಕ ಸೇವಾ (ನಡತೆ) ನಿಯಮಗಳು, 1966 ಇದನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕೆ ದಿನಾಂಕ: 09/02/2012ರ ಅಧಿಸೂಚನೆ ಸಂಖ್ಯೆ: ಸಿಆಸುಇ 47 ಸೇನಿಸಿ 2008ರಲ್ಲಿ ಪ್ರಕಟಿಸಿರುವ ಈ ಮುಂದಿನ ನಿಯಮಗಳ ಕರಡನ್ನು ಅಧಿಕೃತ ರಾಜ್ಯಪತ್ರದಲ್ಲಿ ಇದರ ಪ್ರಕಟಣೆಯ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಅದರಿಂದ ಬಾಧಿತರಾಗುವ /ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ ದಿನಾಂಕ: 23/02/2012ರ ಕರ್ನಾಟಕ ರಾಜ್ಯಪತ್ರದ ಭಾಗ–IV-ಎ ರಲ್ಲಿ ಕರ್ನಾಟಕ ರಾಜ್ಯ ನಾಗರಿಕ ಸೇವೆಗಳ ಅಧಿನಿಯಮ, 1978 (1990 ರ ಕರ್ನಾಟಕ ಅಧಿನಿಯಮ 14) ರ 3ನೇ ಪ್ರಕರಣದ (2) ನೇ ಉಪಪ್ರಕರಣದ (ಎ) ಖಂಡವನ್ನು ಪ್ರಕರಣ 8ರೊಡನೆ ಓದಿಕೊಂಡಂತೆ, ಇವುಗಳನ್ವಯ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ:

ಸದರಿ ರಾಜ್ಯಪತ್ರವನ್ನು ದಿನಾಂಕ: 23/02/2012ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡು ನಿಯಮಗಳ ಮೇಲೆ ಯಾವುದೇ ಆಕ್ಷೇಪಣೆ / ಸಲಹೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲವಾದ್ದರಿಂದ;

ಈಗ ಕರ್ನಾಟಕ ರಾಜ್ಯ ನಾಗರಿಕ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14) ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1) ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಕೆಳಕಂಡ ನಿಯಮಗಳನ್ನು ರಚಿಸಿದೆ, ಎಂದರೆ:–

**ನಿಯಮಗಳು**

1. **ಹೆಸರು ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ನಾಗರಿಕ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 2012 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ನಿಯಮ 12ಕ್ಕೆ ತಿದ್ದುಪಡಿ:–** ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು, 1966 (ಇನ್ನು ಮುಂದೆ ಸದರಿ ನಿಯಮಗಳು ಎಂದು ಕರೆಯಲಾಗುವುದು) ರ ನಿಯಮ 12ನ್ನು ಈ ಕೆಳಕಂಡಂತೆ ಪ್ರತಿಸ್ಥಾಪಿಸತಕ್ಕದ್ದು, ಎಂದರೆ:–

**"12. ಕಛೇರಿಯ ಮಾಹಿತಿಯನ್ನು ನೀಡುವುದು** – ಪ್ರತಿಯೊಬ್ಬ ಸರ್ಕಾರಿ ನೌಕರನು ವಿಶ್ವಾಸಾರ್ಹತೆಯಿಂದ ಕೂಡಿದ ತನ್ನ ಕರ್ತವ್ಯ ನಿರ್ವಹಣೆಯ ಸಂದರ್ಭದಲ್ಲಿ ಮಾಹಿತಿಯನ್ನು ಮಾಹಿತಿ ಹಕ್ಕು ಕಾಯ್ದೆ (2005 ಕೇಂದ್ರಿಯ ಕಾಯ್ದೆ 22) ಮತ್ತು ಅದರಡಿ ರಚಿಸಲಾದ ನಿಯಮಗಳನ್ವಯ ಮಾಹಿತಿಯನ್ನು ಸಾರ್ವಜನಿಕರಿಗೆ ಒದಗಿಸಲು ಬದ್ಧರಾಗಿರುತ್ತಾರೆ.

ಆದರೆ ಸರ್ಕಾರಿ ನೌಕರರು ಸರ್ಕಾರದ ಸಾಮಾನ್ಯ ಅಥವಾ ನಿರ್ದಿಷ್ಟ ಸೂಚನೆಗಳಿಲ್ಲದ ಹೊರತು ಅಥವಾ ತನ್ನ ಕರ್ತವ್ಯ ನಿರ್ವಹಣೆಯನ್ನು ವಿಶ್ವಾಸಾರ್ಹತೆಯಿಂದ ನಿರ್ವಹಿಸುವ ಸಂದರ್ಭದಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ತಮ್ಮ ಅಧಿಕಾರದ ವ್ಯಾಪ್ತಿಯನ್ನು ಮೀರಿ ಕಛೇರಿಯ ಯಾವುದೇ ದಸ್ತಾವೇಜನ್ನು ಅಥವಾ ಅದರ ಭಾಗವನ್ನು ಅಥವಾ ರಹಸ್ಯ ಮಾಹಿತಿಯನ್ನು ನೀಡಲು ಅಧಿಕಾರ ಹೊಂದದೇ ಇದ್ದಲ್ಲಿ, ಅಂತಹ ಮಾಹಿತಿಯನ್ನು ಯಾವುದೇ ಸರ್ಕಾರಿ ನೌಕರರಿಗೆ ಅಥವಾ ಯಾವುದೇ ವ್ಯಕ್ತಿಗೆ ನೀಡುವಂತಿಲ್ಲ."

3. **ನಿಯಮ 14ಕ್ಕೆ ತಿದ್ದುಪಡಿ:–** ಈ ನಿಯಮಗಳ ನಿಯಮ 14ರಲ್ಲಿ – 1) ನಿಯಮ 14ರ ಉಪನಿಯಮ (2) ರಲ್ಲಿರುವ ಖಂಡ (i), (ii), (iii) ಕ್ಕೆ ಬದಲಾಗಿ ಈ ಕೆಳಕಂಡದ್ದನ್ನು ಪ್ರತಿಸ್ಥಾಪಿಸತಕ್ಕದ್ದು.

"ಸರ್ಕಾರಿ ನೌಕರರ ಮಾಸಿಕ ಮೂಲ ವೇತನ"

2) ಉಪನಿಯಮ (3) ರಲ್ಲಿರುವ ಖಂಡ (i), (ii), (iii) ಕ್ಕೆ ಬದಲಾಗಿ ಈ ಕೆಳಕಂಡದ್ದನ್ನು ಪ್ರತಿಸ್ಥಾಪಿಸತಕ್ಕದ್ದು.

"ಸರ್ಕಾರಿ ನೌಕರರ ಮಾಸಿಕ ಮೂಲ ವೇತನದ 1/2 (ಅರ್ಧದಷ್ಟು)"

3) ಉಪನಿಯಮ (4) ರಲ್ಲಿರುವ ಖಂಡ (i), (ii) ಕ್ಕೆ ಬದಲಾಗಿ ಈ ಕೆಳಕಂಡದ್ದನ್ನು ಪ್ರತಿಸ್ಥಾಪಿಸತಕ್ಕದ್ದು.

"ಸರ್ಕಾರಿ ನೌಕರರ ಒಂದು ತಿಂಗಳ ಮೂಲ ವೇತನದ 1/4 ರಷ್ಟು (ಕಾಲು ಭಾಗದಷ್ಟು)"

4. **ನಿಯಮ 23ಕ್ಕೆ ತಿದ್ದುಪಡಿ:–** ಈ ನಿಯಮಗಳ ನಿಯಮ 23ರಲ್ಲಿ – 1) ನಿಯಮ 23ರ ಉಪನಿಯಮ (1) ರಡಿಯಲ್ಲಿರುವ ಟಿಪ್ಪಣಿ IIರಲ್ಲಿರುವ ರೂ.1000/– ಎಂಬ **ಪದಗಳು ಮತ್ತು ಅಂಕಿಗಳ ಬದಲಾಗಿ** ರೂ.5000/– ಎಂದು ಪ್ರತಿಸ್ಥಾಪಿಸತಕ್ಕದ್ದು.

2) ಉಪನಿಯಮ (3) ರಲ್ಲಿರುವ "ಯಾವುದೇ ಸಮೂಹ – ಎ ಅಥವಾ ಸಮೂಹ – ಬಿ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರರ ಸಂದರ್ಭದಲ್ಲಿ ರೂ.10,000/– [ಹತ್ತು ಸಾವಿರ ರೂಪಾಯಿಗಳು] ಅಥವಾ ಯಾವುದೇ ಸಮೂಹ – ಸಿ ಅಥವಾ ಸಮೂಹ – ಡಿ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರರ ಸಂದರ್ಭದಲ್ಲಿ ರೂ.5,000/– [ಐದು ಸಾವಿರ ರೂಪಾಯಿಗಳು]" ಎಂಬ **ಪದಗಳಿಗೆ ಬದಲಾಗಿ** "ಸರ್ಕಾರಿ ನೌಕರರ ಮಾಸಿಕ ಮೂಲ ವೇತನ" ಎಂದು ಪ್ರತಿಸ್ಥಾಪಿಸತಕ್ಕದ್ದು; ಮತ್ತು

3) ಉಪನಿಯಮ (3ಎ) ರಲ್ಲಿರುವ "ಯಾವುದೇ ಸಮೂಹ – ಎ ಅಥವಾ ಸಮೂಹ – ಬಿ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರರ ಸಂದರ್ಭದಲ್ಲಿ ರೂ.10,000/– [ಹತ್ತು ಸಾವಿರ ರೂಪಾಯಿಗಳು] ಅಥವಾ ಯಾವುದೇ ಸಮೂಹ – ಸಿ ಅಥವಾ ಸಮೂಹ – ಡಿ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರರ ಸಂದರ್ಭದಲ್ಲಿ ರೂ.5,000/– [ಐದು ಸಾವಿರ ರೂಪಾಯಿಗಳು]" ಎಂಬ **ಪದಗಳಿಗೆ ಬದಲಾಗಿ** "ಸರ್ಕಾರಿ ನೌಕರರ ಮಾಸಿಕ ಮೂಲ ವೇತನ" ಎಂದು ಪ್ರತಿಸ್ಥಾಪಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವರಾಜು**
ಸರ್ಕಾರದ ಉಪ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವಾನಿಯಮಗಳು)

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 47 SRC 2008, Bangalore, dated : 29/03/2012

Whereas the draft of the Karnataka Civil Services (Conduct) Rules, 1966 was published as required by clause (a) of sub section (2) of section 3 read with section 8 of the Karnataka Civil Services Act, 1978 (Karnataka Act 14 of 1990) in Notification No.DPAR 47 SRC 2008, dated: 09/02/2012 in part IV-A of the Karnataka Gazette 23/02/2012 inviting Objections and Suggestions from all persons likely to be affected thereby within 15 days from the date of publication of the draft in the Official Gazette.

Whereas, the said Gazette was made available to the Public on 23rd February, 2012.

And whereas, no objections and suggestions have been received by the State Government.

Now, therefore, in exercise of the powers conferred by sub section (1) of section 3 read with section 8 of the Karnataka State Civil Services Act, 1978 (Karnataka Act 14 of 1990) the Government of Karnataka hereby makes the following rules, namely:-

**RULES**

1. **Title and Commencement:-** (1) These rules may be called the Karnataka Civil Services (Conduct) (Amendment) Rules, 2012.

   (2) They shall come into force from the date of their publication in the Official Gazette.

2. **Amendment of Rule 12:-** In the Karnataka Civil Services (Conduct) Rules, 1966 (hereinafter referred to as the said rules) for Rule 12, the following shall be substituted, namely:-

   **"12. Communication of Official Information -** Every Government servant shall, in performance of his duties in good faith, communicate information to a person in accordance with the provisions of the Right to Information Act, 2005 (Central Act 22 of 2005) and the rules made thereunder:

   Provided that no Government servant shall, except in accordance with any general or special order of the Government or in performance in good faith of the duties assigned to him, communicate, directly or indirectly, any official document or any part thereof or classified information to any Government servant or any other person to whom he is not authorized to communicate such document or classified information".

3. **Amendment of Rule 14:-** In rule 14 of the said rules –

   (1) In sub-rule (2), for clauses (i), (ii), (iii), the following shall be substituted, namely:-

   "the monthly basic salary of the Government Servant"

   (2) In sub – rule (3), for clauses (i), (ii), (iii), the following shall be substituted, namely:-

   "1/2 (half) of the monthly basic salary of the Government Servant"

   (3) In sub – rule (4), for clauses (i), (ii), the following shall be substituted, namely:-

   "1/4 (one fourth) of the monthly basic salary of the Government Servant"

4. **Amendment of Rule 23:-** In rule 23 of the said rules –

   (i) In sub rule (1) in the Note II for words and figures 'Rs.1000', the words and figures Rs.5,000 shall be substituted.

   (ii) In sub rule (3) for the words 'Rs 10,000 in case of Government Servant holding any Group – A or Group – B post or Rs.5,000 in case of Government Servant holding any Group – C or Group – D post the words 'the monthly basic salary of the Government Servant' shall be substituted; and

(iii) In sub rule (3A) for the words 'Rs.10,000 in case of Government Servant holding any Group – A or Group – B post or Rs.5,000 in case of Government Servant holding any Group – C or Group – D post the words 'the monthly basic salary of the Government Servant' shall be substituted.

By order and in the name of the Governor of Karnataka

**DEVARAJU**
Deputy Secretary to Government
Department of Personnel and Administrative
Reforms (Service Rules)

# ವಿಶೇಷ ಪತ್ರಿಕೆ



| ಭಾಗ – **IV-A** | ಬೆಂಗಳೂರು, ಗುರುವಾರ, ಮಾರ್ಚ್ ೨೯, ೨೦೧೨ (ಚೈತ್ರ ೯, ಶಕ ವರ್ಷ ೧೯೩೪) | ನಂ. ೨೨೬ |
|---|---|---|



## HEALTH AND FAMILY WELFARE SECRETARIAT

### NOTIFICATION

**No: HFW 6 HSM 2012, Bangalore, dated: 29/03/2012**

The draft of the following rules, which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 [Karnataka Act 14 of 1990] is hereby published as required by clause (a) of sub-section (2) of section 3 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Secretary to Government, Health and Family Welfare Department, Vikasa Soudha, Bangalore-560 001.

### DRAFT RULES

**1. Title, commencement and application.-** (1) These rules may be called the Karnataka Health and Family Welfare Services [Recruitment to Group-D Posts] [Special] Rules, 2012.

(2) They shall come into force from the date of their publication in the Official Gazette.

(3) Notwithstanding anything contained in the Karnataka Civil Services (General Recruitment) Rules, 1977 or in the Karnataka Health and Family Welfare Department Services (Recruitment) Rules, 1965 or any other rules of recruitment relating to the category of posts specified in the Schedule made or deemed to have been made under the Karnataka State Civil Services Act, 1978 (Karnataka Act 14 of 1990), the provision of these rules, shall apply to the 2323 direct recruitment vacancies for the category of posts of Group-D in the Karnataka Department of Health and Family Welfare Services as specified in the Schedule:

Provided that nothing in these rules shall apply to more than one recruitment.

**2. Definitions.-** (1) In these rules, unless the context otherwise requires,-

(a) "Schedule" means the Schedule appended to these rules;

(b) "Special Recruitment Committee" means the Committee Constituted under rule 3;

(c) "Vacancies" means the vacancy of the posts to be filled up as specified in column (1) of the schedule.

(2) Other words and expressions used but not defined in these rules shall have the same meaning assigned to them in the Karnataka Civil Services (General Recruitment) Rules, 1977, as amended from time to time.

**3. Constitution of Special Recruitment Committee,-** There shall be constituted a Special Recruitment Committee at the State level for selecting candidates for recruitment to fill up the vacancies specified in the Schedule, consisting of the following members, namely:-

| | | |
|---|---|---|
| 1 | The Commissioner, Department of Health and Family Welfare Services | Chairman |
| 2 | The Director, Department of Health and Family Welfare Services | Member |
| 3 | The Commissioner, Department of Social Welfare or his representative, not below the rank of Joint Director | Member |
| 4 | The Commissioner, Department of Backward Classes and Minorities or his representative, not below the rank of Joint Director. | Member |
| 5 | The Director, Department of Women and Child Development or his representative, not below the rank of Joint Director. | Member |
| 6 | The Chief Vigilance Officer, Directorate of Health and Family Welfare Services. | Member |
| 7 | The Chief Administrative Officer, Directorate of Health and Family Welfare Services. | Member Secretary |

**4. Qualification and age.-** (1) The qualification for direct recruitment to the vacancies of posts specified in column (1) and (2) of the schedule under these rules, shall be as specified in column (3) there of and the maximum age limit shall be in accordance with the Karnataka State Civil Services (General Recruitment) Rules, 1977.

(2) No candidate shall be eligible for direct recruitment under these rules unless he has studied in Karnataka for not less than ten years, i.e., from 1st Standard to 10th Standard.

**5. Applications for recruitment.-** The Special Recruitment Committee shall advertise category of posts and the number of vacancies in the Official Gazette specifying the conditions of eligibility, the nature of selection, the classification of posts in accordance with the reservations of posts provided by or under any law or order for the time being in force and invite applications from all eligible intending candidates. Abstract of such advertisement shall also be published in at least two leading newspapers having wide circulation in the State, of which one shall be in Kannada language.

**6. Mode of recruitment and list of selected candidates.-** (1) The Special Recruitment Committee shall, from among the candidates who have applied in pursuance to the advertisements under rule 5, prepare a list of candidates eligible for appointment under these rules in respect of the category of post in the order of merit determined on the basis of marks obtained in the qualifying examination as specified in column (3) of the Schedule. The percentage of total marks obtained in the qualifying examination in which he has obtained highest percentage of total marks shall be taken into consideration, subject to the reservation of posts provided by or under any law or any rules for the time being in force.

(2) If two or more candidates have secured equal percentage of total marks in the qualifying examination, the order of merit in respect of such candidates shall be fixed on the basis of their age, the older in age being placed above in the order of merit. The Special Recruitment Committee shall prepare a final selection list on the above basis.

(3) The number of candidates to be selected under sub rule(1), shall be equal to the number of vacancies notified.

(4) The Special Recruitment Committee shall also prepare an additional list of candidates not included in the main list prepared under sub-rule (1) in which the number of candidates to be included shall not exceed ten percent of the total number of vacancies notified in each of the reserved categories (horizontal and vertical). There shall be atleast one candidate in the additional list belonging to each of the reserved categories (horizontal and vertical) represented in

the list under sub-rule(1). If the candidate whose name is included in the list under sub-rule (1) fails to report for duty within the prescribed period then a candidate belonging to same reservation category as for the candidate who failed to report for duty shall be appointed from additional list.

(5) The list prepared under sub-rule (1) and (2) shall be published in the Official Gazette and shall be valid till all the vacancies specified under these rules are filled up or until the expiry of a period of one year from the date of issue of appointment order to the selected candidates, whichever is earlier.

**7. Appointment of candidate.-** (1) The Special Recruitment Committee shall send the list of candidates selected under rule 6 to the Appointing Authority. The candidates, whose names are included in the select list sent by the Special Recruitment Committee, shall be appointed through counseling by the Appointing Authority in the vacancies in the order in which their names are found in the select list after satisfying itself and after such enquiry as may be considered necessary, that each of such candidate is suitable in all respect for such appointment.

(2) The inclusion of the names of the candidates in the list published under sub-rule (2) of rule 6, shall not confer any right of appointment. The candidates in the additional list may be appointed in the post, not exceeding the extent of unfilled vacancies in the main list.

**8. General.-** The cost of application and bond fee shall be as fixed by the Special Recruitment Committee from time to time. The amount so collected shall be deposited in any of the nationalized banks by opening an account in the name of the Special Recruitment Committee. The Member-Secretary shall be authorized to operate such account on behalf of the Committee to meet the expenses incurred in connection with the selection of the candidates such as paid publication in news papers, verification of documents, computerizing and counseling procedure etc., with the prior approval of the Chairman of the Special Recruitment Committee.

**9. Application of other rules.-** The Karnataka Civil Services (Classification, Control and Appeal) Rules, 1957, the Karnataka Civil Services (Conduct) Rules, 1966 and Karnataka Civil Services (Probation) Rules, 1977 and all other rules for the time being in force regulating the recruitment and conditions of service of Government servants made or deemed to have been made under the Karnataka State Civil Services Act, 1978 (Karnataka Act 14 of 1990) in so far as such rules are not inconsistent with the provisions of these rules shall be applicable to the selection made and to the persons appointed under these rules.

**SCHEDULE**

(See rule 4 (1) and 6)

| **Category of Posts and Scale of Pay** | **No. of Posts** | **Minimum Qualification** |
|---|---|---|
| **1** | **2** | **3** |
| Hospital Attendant Grade-II Group-D Posts in the Hospitals/Primary Health Centers/Community Health Centers in Health and Family Welfare Department. (Rs. 4800-7275) | 2323 | Must have Passed SSLC / 10th Standard Examination. |

By order and in the name of the Governor of Karnataka,

**I. HEMANATH**

Under Secretary to Government,

Health and Family Welfare Department

(Cadre and Recruitment Rules)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಮಾರ್ಚ್ ೨೯, ೨೦೧೨ (ಚೈತ್ರ ೯, ಶಕ ವರ್ಷ ೧೯೩೪) | ನಂ. ೨೨೭ |
|---|---|---|


## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 27 ಶಾಸನ 2012, ಬೆಂಗಳೂರು, ದಿನಾಂಕ: 29.03.2012**

ಕರ್ನಾಟಕ ಧನವಿನಿಯೋಗ ವಿಧೇಯಕ, 2012ಕ್ಕೆ 2012ರ ಮಾರ್ಚ್ ತಿಂಗಳ ಇಪ್ಪತ್ತೊಂಬತ್ತನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2012ರ ಕರ್ನಾಟಕ ಅಧಿನಿಯಮ ಸಂಖ್ಯೆ: 13 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2012ರ ಕರ್ನಾಟಕ ಅಧಿನಿಯಮ ಸಂಖ್ಯೆ 13**

(2012ರ ಮಾರ್ಚ್ ಇಪ್ಪತ್ತೊಂಬತ್ತನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕರ್ನಾಟಕ ಧನವಿನಿಯೋಗ ಅಧಿನಿಯಮ, 2012**

(2012ರ ಮಾರ್ಚ್ ಇಪ್ಪತ್ತೊಂಬತ್ತನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ).

2011–12ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಅಧಿಕ ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ಅಧಿನಿಯಮ.

2011–12ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ:

ಇದು ಭಾರತ ಗಣರಾಜ್ಯದ ಅರವತ್ತಮೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗಲಿ.

**1. ಸಂಕ್ಷಿಪ್ತ ಹೆಸರು:** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ ಅಧಿನಿಯಮ, 2012 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ 2011–12ನೇ ಹಣಕಾಸು ವರ್ಷಕ್ಕಾಗಿ 617770.39 ಲಕ್ಷ ರೂಪಾಯಿಗಳ ನೀಡಿಕೆ.–** ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ಸೇವೆಗಳ ಸಂಬಂಧದಲ್ಲಿ 2011–12ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ ಆರು ಸಾವಿರದ ಒಂದು ನೂರ ಎಪ್ಪತ್ತೇಳು ಕೋಟಿ ಎಪ್ಪತ್ತು ಲಕ್ಷದ ಮೂವತ್ತೊಂಬತ್ತು ಸಾವಿರ ರೂಪಾಯಿಗಳು ಮೀರದಷ್ಟು ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು ಮತ್ತು ಉಪಯೋಗಿಸತಕ್ಕದ್ದು.

**3. ಧನವಿನಿಯೋಗ.–** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

**ಅನುಸೂಚಿ**

**(2 ಮತ್ತು 3ನೇ ಪ್ರಕರಣಗಳನ್ನು ನೋಡಿ)**

**(₹. ಲಕ್ಷಗಳಲ್ಲಿ)**

| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ಮೀರದ ಮೊಬಲಗು | | ಒಟ್ಟು |
|---|---|---|---|---|---|
| | | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತನಿಧಿಯಿಂದ ಪ್ರಭೃತವಾದುದನ್ನು | |
| 1 | 2 | | 3 | 4 | 5 |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 2,460.17 | ... | 2,460.17 |

| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ಮೀರದ ಮೊಬಲಗು | | ಒಟ್ಟು |
|---|---|---|---|---|---|
| | | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತನಿಧಿಯಿಂದ ಪ್ರಭೃತವಾದುದನ್ನು | |
| **1** | **2** | | **3** | **4** | **5** |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 4,962.12 | ... | 4,962.12 |
| | | ಬಂಡವಾಳ | 908.00 | ... | 908.00 |
| 03 | ಆರ್ಥಿಕ | ರಾಜಸ್ವ | 1,05,000.00 | ... | 1,05,000.00 |
| | | ಬಂಡವಾಳ | 15,200.00 | ... | 15,200.00 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ರಾಜಸ್ವ | 1,500.90 | 273.83 | 1,774.73 |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 7,746.13 | ... | 7,746.13 |
| | | ಬಂಡವಾಳ | 2,900.00 | ... | 2,900.00 |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ | ಬಂಡವಾಳ | 200.00 | ... | 200.00 |
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 15,355.46 | ... | 15,355.46 |
| | | ಬಂಡವಾಳ | 67,836.72 | ... | 67.836.72 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 833.31 | ... | 833.31 |
| 09 | ಸಹಕಾರ | ರಾಜಸ್ವ | 35,530.00 | ... | 35,530.00 |
| | | ಬಂಡವಾಳ | 90.72 | ... | 90.72 |
| 10 | ಸಮಾಜ ಕಲ್ಯಾಣ | ರಾಜಸ್ವ | 6,929.11 | ... | 6,929.11 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 51,448.98 | ... | 51,448.98 |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 712.61 | ... | 712.61 |
| | | ಬಂಡವಾಳ | 98.00 | ... | 98.00 |
| 13 | ಆಹಾರ ಮತ್ತು ನಾಗರೀಕ ಸರಬರಾಜು | ರಾಜಸ್ವ | 20.00 | ... | 20.00 |
| 14 | ಕಂದಾಯ | ರಾಜಸ್ವ | 9,654.78 | ... | 9,654.78 |
| 15 | ಮಾಹಿತಿ ತಂತ್ರಜ್ಞಾನ | ಬಂಡವಾಳ | 88.00 | ... | 88.00 |
| 16 | ವಸತಿ | ರಾಜಸ್ವ | 5,567.71 | ... | 5,567.71 |
| 17 | ಶಿಕ್ಷಣ | ರಾಜಸ್ವ | 12,042.57 | ... | 12,042.57 |
| | | ಬಂಡವಾಳ | 2,000.00 | ... | 2,000.00 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 21,187.15 | ... | 21,187.15 |
| | | ಬಂಡವಾಳ | 2,735.81 | ... | 2,735.81 |
| 19 | ನಗರಾಭಿವೃದ್ಧಿ | ರಾಜಸ್ವ | 3,490.00 | ... | 3,490.00 |
| | | ಬಂಡವಾಳ | 9,572.00 | ... | 9,572.00 |
| 20 | ಲೋಕೋಪಯೋಗಿ | ರಾಜಸ್ವ | 16,178.71 | ... | 16,178.71 |
| | | ಬಂಡವಾಳ | 76,082.00 | ... | 76,082.00 |

| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ಮೀರದ ಮೊಬಲಗು | | ಒಟ್ಟು |
|---|---|---|---|---|---|
| | | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತನಿಧಿಯಿಂದ ಪ್ರಭೃತವಾದುದನ್ನು | |
| **1** | **2** | | **3** | **4** | **5** |
| 21 | ಜಲಸಂಪನ್ಮೂಲ | ರಾಜಸ್ವ | 4,527.68 | ... | 4,527.68 |
| | | ಬಂಡವಾಳ | 4,546.00 | ... | 4,546.00 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ | ರಾಜಸ್ವ | 2,623.93 | ... | 2,623.93 |
| | | ಬಂಡವಾಳ | 652.50 | ... | 652.50 |
| 23 | ಕಾರ್ಮಿಕ | ರಾಜಸ್ವ | 11.00 | ... | 11.00 |
| | | ಬಂಡವಾಳ | 912.00 | ... | 912.00 |
| 24 | ಇಂಧನ | ರಾಜಸ್ವ | 75,000.00 | ... | 75,000.00 |
| | | ಬಂಡವಾಳ | 50,000.00 | ... | 50,000.00 |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ | 189.14 | ... | 189.14 |
| 27 | ಕಾನೂನು | ರಾಜಸ್ವ | 325.35 | ... | 325.35 |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ | ರಾಜಸ್ವ | 378.00 | ... | 378.00 |
| | **ಮೊತ್ತ** | **ರಾಜಸ್ವ** | **3,83,674.81** | **273.83** | **3,83,948.64** |
| | | **ಬಂಡವಾಳ** | **2,33,821.75** | | **2,33,821.75** |
| | **ಒಟ್ಟು ಮೊತ್ತ** | | **6,17,496.56** | **273.83** | **6,17,770.39** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

# ವಿಶೇಷ ಪತ್ರಿಕೆ

ಭಾಗ – **IV-A** | ಬೆಂಗಳೂರು, ಗುರುವಾರ, ಮಾರ್ಚ್ ೨೯, ೨೦೧೨ (ಚೈತ್ರ ೯, ಶಕ ವರ್ಷ ೧೯೩೪) | ನಂ. ೨೨೮

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/3/Bill/2012, Bangalore, Dated: 29.3.2012**

The following Bill was introduced in Legislative Assembly on 29.3.2012.

## ಕರ್ನಾಟಕ ವಿಧಾನ ಸಭೆ

**ಹದಿಮೂರನೇ ವಿಧಾನ ಸಭೆ**

**ಹದಿಮೂರನೇ ಅಧಿವೇಶನ**

## ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ತಿದ್ದುಪಡಿ) ವಿಧೇಯಕ, 2012

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 3)**

ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು (2004ರ ಕರ್ನಾಟಕ ಅಧಿನಿಯಮ 32) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ತಿದ್ದುಪಡಿ) ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು 2012ರ ಏಪ್ರಿಲ್ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 4ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ (2004ರ ಕರ್ನಾಟಕ ಅಧಿನಿಯಮ 32) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 4ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ,–

(i) (ಬಿ) ಖಂಡದಲ್ಲಿ (ii)ನೇ ಉಪಖಂಡದಲ್ಲಿ "ಶೇಕಡಾ ಹದಿನೈದು" ಎಂಬ ಪದಗಳಿಗೆ "ಶೇಕಡಾ ಹದಿನೇಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) ಕೊನೆಯಲ್ಲಿ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು. ಮತ್ತು ಯಾವಾಗಲೂ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು. ಎಂದರೆ;–

"ಪರಂತು, ಕೇಂದ್ರ ಮಾರಾಟ ತೆರಿಗೆ ಅಧಿನಿಯಮ, 1956ರ (1956ರ ಕೇಂದ್ರ ಅಧಿನಿಯಮ, 74) 14ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದಂತೆ ಘೋಷಿಸಲಾದ ಸರಕುಗಳ ಸಂಬಂಧದಲ್ಲಿ ತೆರಿಗೆಯ ದರವು 2011ರ ಏಪ್ರಿಲ್ ಎಂಟನೇ ದಿನಾಂಕದಿಂದ 2011ರ ಏಪ್ರಿಲ್ ಹನ್ನೊಂದನೇ ದಿನಾಂಕದವರೆಗೆ ಶೇಕಡಾ ನಾಲ್ಕರಷ್ಟು ಇರತಕ್ಕದ್ದು. "

**3. 11ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 11ನೇ ಪ್ರಕರಣದಲ್ಲಿ, (ಸಿ) ಉಪಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಸಿ) ಕಾಮಗಾರಿಗಳ ಕರಾರನ್ನು ನಿರ್ವಹಿಸುವ ಯಾವೊಬ್ಬ ವ್ಯಾಪಾರಿಯು,–

(i) ಭಾಗಶ: ಅಥವಾ ಪೂರ್ಣವಾಗಿ ಕಾಮಗಾರಿಗಳ ಕರಾರುಗಳನ್ನು ತನಗಾಗಿ ನಿರ್ವಹಿಸಿದ್ದಕ್ಕೆ ಪ್ರತಿಫಲವಾಗಿ, ಯಾವೊಬ್ಬ ಉಪ ಕರಾರುದಾರನಿಗೆ ಸಂದಾಯ ಮಾಡಿದ ಅಥವಾ ಸಂದಾಯ ಮಾಡತಕ್ಕ ಯಾವುದೇ ಮೊಬಲಗಿನ ಮೇಲೆ, ಕಡಿತವನ್ನು ಕ್ಲೇಮು ಮಾಡಿದಲ್ಲಿ; ಮತ್ತು

(ii) ಕಾಮಗಾರಿ ಕರಾರನ್ನು ನಿರ್ವಹಿಸುವ ಸಂಬಂಧದಲ್ಲಿ, ಯಾವುದೇ ವರ್ಗಾವಣೆಯ ಸ್ವತ್ತಿನ ಸರಕಿನಲ್ಲಿ ಒಳಗೊಂಡಿರದ ಕಾರ್ಮಿಕ ಅಥವಾ ಇತರ ಅಂತಹ ಚಾರ್ಜುಗಳ ಸಂಬಂಧದಲ್ಲಿ ವಾಸ್ತವವಾಗಿ ವೆಚ್ಚ ಮಾಡಿದ ಮೊಬಲಗಿನ ಸಂಬಂಧದಲ್ಲಿ, ಅದನ್ನು ಕಡಿತವೆಂದು ಕ್ಲೇಮು ಮಾಡಿದಲ್ಲಿ,

– ಹೂಡುವಳಿ ತೆರಿಗೆಯನ್ನು ಕಡಿತಗೊಳಿಸತಕ್ಕದ್ದಲ್ಲ. "

**4. 18ಎ ಪ್ರಕರಣವನ್ನು ಬಿಟ್ಟುಬಿಡುವುದು.–** ಮೂಲ ಅಧಿನಿಯಮದ 18ಎ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**5. 30ನೇ ಪ್ರಕರಣವನ್ನು ಬಿಟ್ಟುಬಿಡುವುದು.–** ಮೂಲ ಅಧಿನಿಯಮದ 30ನೇ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**6. 35ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 35ನೇ ಪ್ರಕರಣದಲ್ಲಿ (4)ನೇ ಉಪ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ;–

" (4) 38ನೇ ಪ್ರಕರಣದ (3)ನೇ ಉಪ ಪ್ರಕರಣದ ಅಡಿಯಲ್ಲಿ ಸಲ್ಲಿಸಿದ ವಿವರಪಟ್ಟಿಯನ್ನು ಹೊರತುಪಡಿಸಿ, ಈ ಅಧಿನಿಯಮದ ಅಡಿಯಲ್ಲಿ ಒಂದು ವಿವರ ಪಟ್ಟಿಯನ್ನು ನೀಡಿರುವ ಯಾವೊಬ್ಬ ವ್ಯಾಪಾರಿಯು, ನಿಯಮಿಸಲಾದ ಪ್ರಾಧಿಕಾರವು ಮಾಡಿದ ತಪಾಸಣೆಯ ಅಥವಾ ಯಾವುದೇ ಇತರ ಮಾಹಿತಿ ಅಥವಾ ಸಾಕ್ಷ್ಯದ ಸ್ವೀಕರಿಸಿದ ಕಾರಣದ ಹೊರತಾಗಿ, ಅದರಲ್ಲಿ ಯಾವುದೇ ಲೋಪ ಅಥವಾ ಸರಿಯಲ್ಲದ ಹೇಳಿಕೆಯು ಒಳಗೊಂಡಿದ್ದರೆ,–

(ಎ) ಆತನು, ಮುಂಬರುವ ತೆರಿಗೆ ಅವಧಿಗಾಗಿ ವಿವರ ಪಟ್ಟಿಕೆಯನ್ನು ಸಲ್ಲಿಸುವುದಕ್ಕಾಗಿ ನಿಯಮಿಸಲಾದ ಕಾಲದೊಳಗೆ ಒಂದು ಪರಿಷ್ಕೃತ ವಿವರಪಟ್ಟಿಯನ್ನು ಒದಗಿಸತಕ್ಕದ್ದು; ಮತ್ತು

(ಬಿ) ಆತನು, ನಿಯಮಿಸಲಾದ ಪ್ರಾಧಿಕಾರದಿಂದ ಹಾಗೆ ಅನುಮತಿಸಿದಲ್ಲಿ, ತದನಂತರ ಯಾವುದೇ ಸಮಯದಲ್ಲಿ ಸಂಬಂಧಿಸಿದ ತೆರಿಗೆ ಅವಧಿಯ ಮುಕ್ತಾಯದಿಂದ ಆರು ತಿಂಗಳುಗಳೊಳಗೆ ಒಂದು ಪರಿಷ್ಕೃತ ವಿವರ ಪಟ್ಟಿಯನ್ನು ಒದಗಿಸತಕ್ಕದ್ದು."

**7. 40ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 40ನೇ ಪ್ರಕರಣದಲ್ಲಿ (1) ಮತ್ತು (2)ನೇ ಉಪ ಪ್ರಕರಣಗಳಿಗೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಯಾವುದೇ ನಿಯಮಿಸಲಾದ ತೆರಿಗೆ ಅವಧಿಗಾಗಿ ಬಾಕಿ ತೆರಿಗೆಯ ಮೊಬಲಗಿನ ಸಂಬಂಧದಲ್ಲಿ 38ನೇ ಪ್ರಕರಣದ ಅಡಿಯಲ್ಲಿ ತೆರಿಗೆ ನಿರ್ಧರಣೆಯನ್ನು ಅಥವಾ 39ನೇ ಪ್ರಕರಣದ ಅಡಿಯಲ್ಲಿ ತೆರಿಗೆಯ ಮರು ನಿರ್ಧರಣೆಯನ್ನು, ನಿಯಮಿಸಲಾದ ತೆರಿಗೆ ಅವಧಿಯ ಮುಕ್ತಾಯದ ತರುವಾಯ ಐದು ವರ್ಷಗಳ ನಂತರ ಮಾಡತಕ್ಕದ್ದಲ್ಲ:

ಪರಂತು, ಅವಧಿಯು 2007ರ ಮಾರ್ಚ್ 31ಕ್ಕೆ ಕೊನೆಗೊಳ್ಳುವ ವರೆಗಿನ ಅವಧಿಯವರೆಗೆ ಯಾವುದೇ ತೆರಿಗೆ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆ ಅಥವಾ ತೆರಿಗೆ ಮರು ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆ ಅವಧಿಯು ಮುಕ್ತಾಯವಾದ ತರುವಾಯ ಎಂಟು ವರ್ಷಗಳ ಅವಧಿಯೊಳಗೆ ಮಾಡತಕ್ಕದ್ದು:

ಮತ್ತು ಪರಂತು, 2007ರ ಏಪ್ರಿಲ್ 1ನೇ ದಿನಾಂಕದಿಂದ ಆರಂಭವಾಗಿ 2012ರ ಮಾರ್ಚ್ 31ನೇ ದಿನಾಂಕಕ್ಕೆ ಕೊನೆಗೊಳ್ಳುವ ಅವಧಿಯವರೆಗಿನ ಯಾವುದೇ ತೆರಿಗೆ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆಯನ್ನು ಅಥವಾ ಮರು ತೆರಿಗೆ ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆ ಅವಧಿಯು ಮುಕ್ತಾಯವಾದ ತರುವಾಯ ಏಳು ವರ್ಷಗಳ ಅವಧಿಯೊಳಗೆ ಮಾಡತಕ್ಕದ್ದು.

(2) (1)ನೇ ಉಪ–ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ನೋಂದಾಯಿತನಾಗಲು ಬದ್ಧನಾಗಿದ್ದಾಗ್ಯೂ ಹಾಗೆ ಮಾಡಲು ತಪ್ಪಿದ ಒಬ್ಬ ವ್ಯಾಪಾರಿಯು ಯಾವುದೇ ತೆರಿಗೆಯನ್ನು ಸಂದಾಯ ಮಾಡದಿದ್ದಲ್ಲಿ ಅಥವಾ ತೆರಿಗೆಯನ್ನು ಮೋಸದಿಂದ ವಂಚಿಸಿ 79ನೇ ಪ್ರಕರಣದ ಅಡಿಯಲ್ಲಿ ಶಿಕ್ಷೆಗೆ ಗುರಿಯಾಗುವ ಯಾವುದೇ ವ್ಯಾಪಾರಿಯ ಸಂದರ್ಭದಲ್ಲಿ, ನಿಯಮಿಸಲಾದ ತೆರಿಗೆ ಅವಧಿಯು ಮುಕ್ತಾಯದಿಂದ ಎಂಟು ವರ್ಷಗಳ ಅವಧಿಯೊಳಗೆ ತೆರಿಗೆ ನಿರ್ಧರಣೆಯನ್ನು ಮಾಡಬಹುದು ಅಥವಾ ಮರು ನಿರ್ಧರಣೆಯನ್ನು ಮಾಡಬಹುದು:

ಪರಂತು, 2007ರ ಮಾರ್ಚ್ 31ನೇ ದಿನಾಂಕಕ್ಕೆ ಕೊನೆಗೊಳ್ಳುವ ಅವಧಿಯವರೆಗೆ ಯಾವುದೇ ತೆರಿಗೆ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆ ಅಥವಾ ತೆರಿಗೆಯ ಮರು ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆ ಅವಧಿಯು ಕೊನೆಗೊಂಡ ತರುವಾಯ ಹತ್ತು ವರ್ಷಗಳ ಅವಧಿಯೊಳಗೆ ಈ ಉಪಪ್ರಕರಣದಡಿಯಲ್ಲಿ ಮಾಡತಕ್ಕದ್ದು."

**8. 53ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 53ನೇ ಪ್ರಕರಣದ (2)ನೇ ಉಪ ಪ್ರಕರಣದಲ್ಲಿ, ಈ ಮುಂದಿನ ಪತಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, (ಡಿ) ಖಂಡದಡಿಯಲ್ಲಿ ನಿರ್ದಿಷ್ಟಪಡಿಸಿದ ಘೋಷಣೆಯಲ್ಲಿ ಒಳಗೊಳ್ಳಬೇಕೆಂದು ನಿಯಮಿಸಲಾದ ವಿವರಗಳನ್ನು, ಯಾವುದೇ ನಿರ್ದಿಷ್ಟಪಡಿಸಿದ ವರ್ಗದ ಸರಕುಗಳ ಅಥವಾ ಯಾವುದೇ ನಿರ್ದಿಷ್ಟಪಡಿಸಿದ ವರ್ಗದ ವ್ಯಾಪಾರಿಗಳ ಅಥವಾ ಯಾವುದೇ ನಿರ್ದಿಷ್ಟಪಡಿಸಿದ ವರ್ಗದ ಅನುಸಾರದ ವ್ಯವಹರಣೆಗಳನ್ನು ಯಾವ ವೆಬ್‌ಸೈಟಿನಲ್ಲಿ ನಮೂದಿಸಬೇಕೋ ಆ ವೆಬ್‌ಸೈಟನ್ನು ಆಯುಕ್ತನು ಅಧಿಸೂಚಿಸಬಹುದು. ಆಯುಕ್ತನು ವೆಬ್‌ಸೈಟನ್ನು ಹಾಗೆ ಅಧಿಸೂಚಿಸಿದಲ್ಲಿ, ಸರಕುಗಳ ವಾಹನ ಅಥವಾ ದೋಣಿ ಅಥವಾ ನೌಕೆ ಅಥವಾ ಅಂತಹುದೇ ಹಡಗಿನ ಮಾಲೀಕ ಅಥವಾ ಪ್ರಭಾರದಲ್ಲಿರುವ ಯಾವೊಬ್ಬ ವ್ಯಕ್ತಿಯು, ಅಧಿಸೂಚಿತ ವೆಬ್ ಸೈಟ್ ನಲ್ಲಿ ಮೇಲಿನ ವಿವರಗಳನ್ನು ನಮೂದಿಸತಕ್ಕದ್ದು. ಮತ್ತು ಅಂಥ ವೈಬ್‌ಸೈಟಿನಲ್ಲಿ ವಿವರಗಳನ್ನು ನಮೂದಿಸಿರುವುದಕ್ಕೆ ರುಜುವಾತನ್ನು ಚೆಕ್ ಪೋಸ್ಟ್‌ನ ಅಥವಾ ಸುಂಕದಕಟ್ಟೆಯ ಪ್ರಭಾರದಲ್ಲಿರುವ ಅಧಿಕಾರಿಯ ಅಥವಾ ಯಾರೇ ಪ್ರಾಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸತಕ್ಕದ್ದು."

**9. 54ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 54ನೇ ಪ್ರಕರಣದಲ್ಲಿ,–

(i) (1)ನೇ ಉಪ ಪ್ರಕರಣದಲ್ಲಿ,

(ಎ) "ಈ ಅಧಿನಿಯಮದ ಅಡಿಯಲ್ಲಿ ತೆರಿಗೆಗೆ ಗುರಿಯಾಗುವ ಸರಕುಗಳನ್ನು ಕೊಂಡೊಯ್ಯುತ್ತಿರುವ ಒಂದು ವಾಹನವು" ಎಂಬ ಪದಗಳಿಗೆ "ಸರ್ಕಾರ ಅಥವಾ ಆಯುಕ್ತನು ಅಧಿಸೂಚಿಸಬಹುದಾದಂಥ ಸರಕುಗಳನ್ನು ಕೊಂಡೊಯ್ಯುತ್ತಿರುವ ಒಂದು ವಾಹನವು" ಎಂಬ ಪದಗಳನ್ನು ಪ್ರಯೋಜಿಸತಕ್ಕದ್ದು; ಮತ್ತು

(ಬಿ) ಪರಂತುಕಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ಪರಂತು, ರಾಜ್ಯದೊಳಗೆ ಅಂಥ ವಾಹನವು ಪ್ರವೇಶಿಸಿದ ತರುವಾಯ ಅಥವಾ ರಾಜ್ಯದಿಂದ ಅದರ ಸಾಗಣೆಯು ಆರಂಭಗೊಂಡ ತರುವಾಯ, ಸಾಗಣೆ ಪಾಸನ್ನು ನೀಡುವುದಕ್ಕಾಗಿ, ವಾಹನದ ಚಾಲಕ ಅಥವಾ ಅದರ ಪ್ರಭಾರದಲ್ಲಿರುವ ಯಾವೊಬ್ಬ ಇತರ ವ್ಯಕ್ತಿಯು ಒದಗಿಸತಕ್ಕ ಅವಶ್ಯಕ ಮಾಹಿತಿಯನ್ನು ಯಾವ ವೆಬ್‌ಸೈಟ್‌ನ ಮೂಲಕ ಒದಗಿಸಬೇಕೋ ಆ ವೆಬ್‌ಸೈಟ್‌ನ್ನು ಆಯುಕ್ತನು ಅಧಿಸೂಚಿಸಬಹುದು. ಆಯುಕ್ತನು ವೆಬ್‌ಸೈಟನ್ನು ಹಾಗೆ ಅಧಿಸೂಚಿಸಿದಲ್ಲಿ, ವಾಹನವು ರಾಜ್ಯದೊಳಗೆ ಪ್ರವೇಶಿಸಿದ ತರುವಾಯ ಅಥವಾ ರಾಜ್ಯದಿಂದ ಸಾಗಣೆಯನ್ನು ಪ್ರಾರಂಭಿಸಿದ ತರುವಾಯ ವಾಹನದ ಚಾಲಕ ಅಥವಾ ಯಾವೊಬ್ಬ ಇತರ ವ್ಯಕ್ತಿಯು ಸಾಗಣೆ ಪಾಸಿಗಾಗಿ ಮೇಲಿನ ಮಾಹಿತಿಯನ್ನು ಅಧಿಸೂಚಿತ ವೆಬ್‌ಸೈಟ್‌ನಲ್ಲಿ ನಮೂದಿಸತಕ್ಕದ್ದು."

(ii) (2)ನೇ ಉಪ ಪ್ರಕರಣದಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಚಾಲಕ ಅಥವಾ ವಾಹನದ ಪ್ರಭಾರದಲ್ಲಿರುವ ವ್ಯಕ್ತಿಯು ಚೆಕ್ ಪೋಸ್ಟ್ ಅಥವಾ ಸುಂಕದಕಟ್ಟೆ ಇಲ್ಲದ ಮಾರ್ಗದ ಮೂಲಕ ರಾಜ್ಯದಿಂದ ಹೊರಗೆ ಹೋಗುವ ಮೊದಲು (1)ನೇ ಉಪ-ಪ್ರಕರಣದಡಿಯಲ್ಲಿ ಪಡೆದ ಸಾಗಣೆ ಪಾಸಿನ ವಿವರಗಳನ್ನು ನಮೂದಿಸತಕ್ಕಂಥ ವೆಬ್‌ಸೈಟ್‌ನ್ನು ಆಯುಕ್ತನು ಅಧಿಸೂಚಿಸಬಹುದು. ಆಯುಕ್ತನು ಹಾಗೆ ವೆಬ್‌ಸೈಟನ್ನು ಅಧಿಸೂಚಿಸಿದಲ್ಲಿ ವಾಹನದ ಚಾಲಕ ಅಥವಾ ಅದರ ಪ್ರಭಾರದಲ್ಲಿರುವ ಇತರ ಯಾವೊಬ್ಬ ವ್ಯಕ್ತಿಯು, (1)ನೇ ಉಪಪ್ರಕರಣದ ಅಡಿಯಲ್ಲಿ ಪಡೆದ ಸಾಗಣೆ ಪಾಸಿನ ವಿವರಗಳನ್ನು ಅಧಿಸೂಚಿತ ವೆಬ್‌ಸೈಟಿನಲ್ಲಿ ನಮೂದಿಸತಕ್ಕದ್ದು."

**10. 62ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 62ನೇ ಪ್ರಕರಣದ (4)ನೇ ಉಪ ಪ್ರಕರಣದಲ್ಲಿ,-

(i) (ಎ) ಖಂಡದಲ್ಲಿ "ತೆರಿಗೆ ಮತ್ತು ದಂಡ ಸಂದಾಯದ" ಎಂಬ ಪದಗಳಿಗೆ "ತೆರಿಗೆ ಮತ್ತು ಇತರ ಮೊಬಲಗಿನ ಸಂದಾಯದ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) (ಸಿ) ಖಂಡದಲ್ಲಿ,-

(ಎ) (i) ಉಪಖಂಡಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(i) ಅಪೀಲು ಪ್ರಾಧಿಕಾರಿಯು ತನ್ನ ವೇಚನಾನುಸಾರ, ಅಪೀಲುದಾರನು ನಿಯಮಿಸಲಾದ ಅಪೀಲಿನ ನಮೂನೆಯ ಜೊತೆಯಲ್ಲಿ ತೆರಿಗೆಯ ಅರ್ಧ ಭಾಗದಷ್ಟನ್ನು ಮತ್ತು ಇತರ ಮೊಬಲಗನ್ನು ಸಂದಾಯ ಮಾಡಿದ್ದರೆ, ಇನ್ನುಳಿದ ಅರ್ಧದಷ್ಟು ತೆರಿಗೆಯ ಮತ್ತು ಇತರ ಮೊಬಲಗಿನ ಸಂದಾಯಕ್ಕೆ ತಡೆ ನೀಡಬಹುದು."

(ಬಿ) (ii) ನೇ ಉಪಖಂಡದಲ್ಲಿ "ವಿವಾದಿತ ತೆರಿಗೆಯ ಅರ್ಧದಷ್ಟು ಸಂದಾಯ ಮಾಡುವ" ಎಂಬ ಪದಗಳಿಗೆ "ವಿವಾದಿತ ತೆರಿಗೆಯ ಅರ್ಧದಷ್ಟು ಮತ್ತು ಇತರ ಮೊಬಲಗಿನ ಸಂದಾಯ ಮಾಡುವ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

(iii) (ಇ) ಖಂಡವನ್ನು ಬಿಟ್ಟುಬಿಡತಕ್ಕದ್ದು.

**11. 69ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 69ನೇ ಪ್ರಕರಣದ (2-ಎ) ಉಪ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**12. 72ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 72ನೇ ಪ್ರಕರಣದಲ್ಲಿ, 6ನೇ ಉಪ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"(7) ಅಧಿನಿಯಮದ ಉಪಬಂಧಗಳ ಮೂಲಕ ಅಗತ್ಯಪಡಿಸಿದಂಥ ವಿವರ ಪಟ್ಟಿಗಳನ್ನು ನಿರಂತರವಾಗಿ ಮೂರು ತಿಂಗಳು ಅಥವಾ ಸಂದರ್ಭಾನುಸಾರ ಎರಡು ತ್ರೈಮಾಸಿಕಗಳ ಅವಧಿಗೆ ಸಲ್ಲಿಸುವುದಕ್ಕೆ ವಿಫಲನಾದಂಥ ಯಾವೊಬ್ಬ ವ್ಯಾಪಾರಿಯು, ಅಪರಾಧ ನಿರ್ಣಯವಾದ ತರುವಾಯ, ಯಾವುದೇ ತೆರಿಗೆ ಅಥವಾ ದಂಡ ಅಥವಾ ಬಡ್ಡಿ ಅಥವಾ ಆತನಿಂದ ಬರಬೇಕಾದ ಅಥವಾ ಆತನ ಮೇಲೆ ವಿಧಿಸಿದ ಇತರ ಮೊಬಲಗಿನ ಜೊತೆಗೆ, ಆರು ತಿಂಗಳುಗಳಿಗೆ ವಿಸ್ತರಿಸಬಹುದಾದಂಥ ಸಾದಾ ಕಾರಾವಾಸದೊಂದಿಗೆ ಅಥವಾ ಐದು ಸಾವಿರ ರೂಪಾಯಿಗಳಿಗೆ ಕಡಿಮೆ ಇರದ ಆದರೆ ಇಪ್ಪತ್ತೈದು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಅಂಥ ಜುಲ್ಮಾನೆಯಿಂದ ಅಥವಾ ಅವೆರೆಡರಿಂದಲೂ ಮತ್ತು ಅಪರಾಧವು ಮುಂದುವರೆಯುತ್ತಿರುವಾಗ, ಅಪರಾಧವು ಮುಂದುವರೆದ ಅವಧಿಗೆ ಪ್ರತಿ ದಿನ ಎರಡು ನೂರು ರೂಪಾಯಿಗಳನ್ನು ಮೀರದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು."

**13. 74ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 74ನೇ ಪ್ರಕರಣದಲ್ಲಿ, (1)ನೇ ಉಪ ಪ್ರಕರಣದಲ್ಲಿ,-

(i) "ಎರಡು ಸಾವಿರ ರೂಪಾಯಿಗಳಿಗೆ" ಎಂಬ ಪದಗಳಿಗೆ "ಐದು ಸಾವಿರ ರೂಪಾಯಿಗಳಿಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) "ಐದು ಸಾವಿರ ರೂಪಾಯಿಗಳಿಗೆ" ಎಂಬ ಪದಗಳಿಗೆ "ಹತ್ತು ಸಾವಿರ ರೂಪಾಯಿಗಳಿಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**14. 75ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 75ನೇ ಪ್ರಕರಣದಲ್ಲಿ, " ಐದು ಸಾವಿರ ರೂಪಾಯಿಗಳಿಗೆ " ಎಂಬ ಪದಗಳಿಗೆ " ಹತ್ತು ಸಾವಿರ ರೂಪಾಯಿಗಳಿಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**15. 80ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 80ನೇ ಪ್ರಕರಣದಲ್ಲಿ, "79ನೇ ಪ್ರಕರಣದ ಅಡಿಯಲ್ಲಿ" ಎಂಬ ಪದಗಳು ಬರುವ ಎರಡು ಕಡೆಗಳಲ್ಲಿ "72 ಅಥವಾ 79ನೇ ಪ್ರಕರಣದ ಅಡಿಯಲ್ಲಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**16. ಒಂದನೇ ಅನುಸೂಚಿಯ ತಿದ್ದುಪಡಿ.-** ಮೂಲ ಅಧಿನಿಯಮದ ಒಂದನೇ ಅನುಸೂಚಿಯಲ್ಲಿ,-

(i) 4ನೇ ಕ್ರಮ ಸಂಖ್ಯೆಗೆ ಸಂಬಂಧಪಟ್ಟ ನಮೂದುಗಳಿಗೆ ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:-

"4. ಎಲ್ಲ ಬಗೆಯ ಜವಳಿಗಳು ಮತ್ತು ಬಟ್ಟೆಗಳು, ಆದರೆ, ಮೂರನೇ ಅನುಸೂಚಿಯಲ್ಲಿ ಎಲ್ಲಿಯಾದರೂ ನಿರ್ದಿಷ್ಟಪಡಿಸಿದವುಗಳನ್ನು ಅಥವಾ ಸರ್ಕಾರದಿಂದ ಅಧಿಸೂಚಿತವಾದವುಗಳನ್ನು ಹೊರತುಪಡಿಸಿ."

(ii) 47ನೇ ಕ್ರಮ ಸಂಖ್ಯೆಗೆ ಸಂಬಂಧಪಟ್ಟ ನಮೂದುಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು ಮತ್ತು 2011ರ ಏಪ್ರಿಲ್ ಎಂಟನೇ ದಿನಾಂಕದಿಂದ ಪ್ರತಿಯೋಜಿಸಿರುವುದಾಗಿ ಭಾವಿಸತಕ್ಕದ್ದು, ಎಂದರೆ:–

"47. ಸಕ್ಕರೆ ಅಚ್ಚು, ತಿಂಡಿ ಮತ್ತು ಅಂತಹುಗಳನ್ನು ಹೊರತುಪಡಿಸಿ, ಸಕ್ಕರೆ."

**17. ಮೂರನೇ ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಮೂರನೇ ಅನುಸೂಚಿಯಲ್ಲಿ, 29ನೇ ಕ್ರಮಸಂಖ್ಯೆಗೆ ಸಂಬಂಧಪಟ್ಟ ನಮೂದುಗಳ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"30. ಹೆಚ್.ಡಿ.ಪಿ.ಇ ಮತ್ತು ಇತರ ಪ್ಲಾಸ್ಟಿಕ್‌ನಿಂದ ನೇಯ್ದ ಜವಳಿಗಳು"

**18. ಆರನೇ ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಆರನೇ ಅನುಸೂಚಿಯಲ್ಲಿ, 6ನೇ ಕ್ರಮಸಂಖ್ಯೆಗೆ ಸಂಬಂಧಪಟ್ಟ ನಮೂದುಗಳ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"

| | | |
|---|---|---|
| 7. | ಬಣ್ಣ ಹಾಕುವುದು, ಮುದ್ರಣ ಮಾಡುವುದು, ಹೊಲಿಯುವುದು, ಕಸೂತಿ ಕೆಲಸ ಮತ್ತು ಅಂತಹುದನ್ನು ಒಳಗೊಂಡಂತೆ ಸಿದ್ಧ ಉಡುಪುಗಳು, ಜವಳಿಯಿಂದ ತಯಾರಿಸಿದ ಬಟ್ಟೆಯ ದಿರಿಸುಗಳು ಮತ್ತು ಇತರ ಜವಳಿಯಿಂದ ಮಾಡಿದ ವಸ್ತುಗಳನ್ನು ತಯಾರಿಸಿ ಪೂರೈಸುವುದು | ಶೇಕಡಾ ಐದು |

"

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಆಯವ್ಯಯ ಭಾಷಣದಲ್ಲಿ ಮಾಡಿದ ಪ್ರಸ್ತಾವಗಳನ್ನು ಮತ್ತು ಅವುಗಳಿಗೆ ಸಂಬಂಧಿಸಿದ ಇತರ ವಿಷಯಗಳನ್ನು ಜಾರಿಗೊಳಿಸುವುದಕ್ಕಾಗಿ ಮತ್ತು ಸಂಬಂಧಿಸಿದ ಇತರೆ ವಿಷಯಗಳಿಗಾಗಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆಗಳ ಅಧಿನಿಯಮ 2003ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಕೆಲವು ಆನುಷಂಗಿಕ ಮತ್ತು ಪ್ರಾಸಂಗಿಕ ತಿದ್ದುಪಡಿಗಳನ್ನು ಹಾಗೂ ಕೆಲವು ಪ್ರಸ್ತುತ ಉಪಬಂಧಗಳನ್ನು ಸರಳಗೊಳಿಸುವುದಕ್ಕಾಗಿಯೂ ಕೆಲವು ತಿದ್ದುಪಡಿಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

## ಪ್ರತ್ಯಾಯೋಜಿತ ಶಾಸನ ರಚನಾ ಅಧಿಕಾರದ ಕುರಿತು ಜ್ಞಾಪನ ಪತ್ರ

ಖಂಡ–8. 8ನೇ ಖಂಡದ ಅಡಿಯಲ್ಲಿ ಸೇರಿಸಲು ಉದ್ದೇಶಿಸಲಾದ 53ನೇ ಪ್ರಕರಣದ (2)ನೇ ಉಪ ಪ್ರಕರಣವು, ಸರಕುಗಳ ವಾಹನ ಅಥವಾ ದೋಣಿ, ಹಡಗು ಅಥವಾ ಅಂತಹುದೇ ನೌಕೆಯ ಚಾಲಕ ಅಥವಾ ಅದರ ಪ್ರಭಾರದಲ್ಲಿರುವ ಯಾವೊಬ್ಬ ಇತರ ವ್ಯಕ್ತಿಯು ನಮೂದಿಸತಕ್ಕ ನಿರ್ದಿಷ್ಟಪಡಿಸಿದ ಘೋಷಣೆಯಲ್ಲಿ ನಿಯಮಿಸಲಾದ ವಿವರಗಳ ಬಗ್ಗೆ ವೆಬ್‌ಸೈಟನ್ನು ಅಧಿಸೂಚಿಸುವುದಕ್ಕಾಗಿ ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುತ್ತದೆ.

ಖಂಡ–9 (i)(ಎ) 9 (i)(ಎ)ನೇ ಖಂಡದ ಅಡಿಯಲ್ಲಿ ತಿದ್ದುಪಡಿ ಮಾಡಲು ಉದ್ದೇಶಿಸಲಾದ 54ನೇ ಪ್ರಕರಣದ (1)ನೇ ಉಪ ಪ್ರಕರಣವು, ಸರಕುಗಳ ವಾಹನದ ಚಾಲಕ ಅಥವಾ ಅದರ ಪ್ರಭಾರದಲ್ಲಿರುವ ಯಾವೊಬ್ಬ ಇತರ ವ್ಯಕ್ತಿಯು ಪಡೆಯಬೇಕಾದ ಸಾಗಣೆ ಪಾಸಿನ ಸಂಬಂಧದಲ್ಲಿ ಸರಕುಗಳನ್ನು ಅಧಿಸೂಚಿಸುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಮತ್ತು ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುತ್ತದೆ.

ಖಂಡ–9 (i)(ಬಿ) 9 (i)(ಬಿ)ನೇ ಖಂಡದ ಅಡಿಯಲ್ಲಿ ಸೇರಿಸಲು ಉದ್ದೇಶಿಸಲಾದ ಪರಂತುಕವು, ಸಾಗಣೆ ಪಾಸನ್ನು ಪಡೆಯುವುದಕ್ಕಾಗಿ ಸಲ್ಲಿಸಬೇಕಾದ ಅವಶ್ಯಕ ಮಾಹಿತಿಗಳನ್ನು ಯಾವ ವೈಬ್‌ಸೈಟ್‌ನಲ್ಲಿ ನೀಡಬೇಕೋ ಆ ವೆಬ್‌ಸೈಟನ್ನು ಅಧಿಸೂಚಿಸುವುದಕ್ಕಾಗಿ ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುತ್ತದೆ.

ಖಂಡ–9 (i)(ಸಿ) 9 (i)(ಸಿ)ನೇ ಖಂಡದ ಅಡಿಯಲ್ಲಿ ಸೇರಿಸಲು ಉದ್ದೇಶಿಸಲಾದ ಪರಂತುಕವು, ಯಾವುದಕ್ಕಾಗಿ ಸಾಗಣೆ ಪಾಸನ್ನು ನೀಡಲಾಗಿದೆಯೋ ಅದರ ಸಂಬಂಧದಲ್ಲಿ ರಾಜ್ಯದಿಂದ ಹೊರಗೆ ಸರಕುಗಳನ್ನು ತೆಗೆದುಕೊಂಡು ಹೋಗುವುದಕ್ಕೆ

ಮೊದಲು, ಪಡೆದುಕೊಂಡ ಸಾಗಣೆ ಪಾಸಿನ ವಿವರಗಳನ್ನು ಯಾವ ವೆಬ್‌ಸೈಟ್‌ನಲ್ಲಿ ನಮೂದಿಸಬೇಕೋ ಆ ವೆಬ್‌ಸೈಟನ್ನು ಅಧಿಸೂಚಿಸುವುದಕ್ಕಾಗಿ ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುತ್ತದೆ.

ಖಂಡ–16 (i) 16 (i)ನೇ ಖಂಡದ ಅಡಿಯಲ್ಲಿ ಸೇರಿಸಲು ಉದ್ದೇಶಿಸಲಾದ ಒಂದನೇ ಅನುಸೂಚಿಯ 4ನೇ ಕ್ರಮ ಸಂಖ್ಯೆಯ ನಮೂದು, ಸದರಿ ನಮೂದಿನಲ್ಲಿ ಒಳಗೊಳ್ಳದಿರುವ ಜವಳಿ ಮತ್ತು ಬಟ್ಟೆಗಳನ್ನು ಅಧಿಸೂಚಿಸುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾ ಅಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಡಿ.ವಿ. ಸದಾನಂದಗೌಡ**
ಮುಖ್ಯಮಂತ್ರಿಗಳು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

## ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ (2004ರ ಕರ್ನಾಟಕ ಅಧಿನಿಯಮ 32) ಉದ್ಧೃತ ಭಾಗ

**XX XX XX**

**4. ತೆರಿಗೆ ಬದ್ಧತೆ ಮತ್ತು ಅದರ ದರಗಳು.**– (1) 22 ಮತ್ತು 24ನೇ ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಿದಂತೆ ನೋಂದಾಯಿತನಾದ ಅಥವಾ ನೋಂದಾಯಿತನಾಗಲು ಅಗತ್ಯಪಡಿಸಲಾದ ಪ್ರತಿಯೊಬ್ಬ ವ್ಯಾಪಾರಿಯು ತನ್ನ ತೆರಿಗೆಗೆ ಗುರಿಯಾಗತಕ್ಕ ವಹಿವಾಟಿನ ಮೇಲೆ,

(ಎ) ಈ ಮುಂದಿನಂತೆ ಎಂದರೆ,–

(i) ಎರಡನೇ ಅನುಸೂಚಿಯಲ್ಲಿ ನಮೂದಿಸಿದ ಸರಕುಗಳ ಸಂಬಂಧದಲ್ಲಿ ಶೇಕಡಾ ಒಂದರ ದರದಲ್ಲಿ,

(ii) ಮೂರನೇ ಅನುಸೂಚಿಯಲ್ಲಿ ನಮೂದಿಸಿದ ಸರಕುಗಳ ಸಂಬಂಧದಲ್ಲಿ ಶೇಕಡಾ ಐದರ ದರದಲ್ಲಿ, ಮತ್ತು;

(iii) ನಾಲ್ಕನೇ ಅನುಸೂಚಿಯಲ್ಲಿ ನಮೂದಿಸಿದ ಸರಕುಗಳ ಸಂಬಂಧದಲ್ಲಿ ಶೇಕಡಾ ಇಪ್ಪತ್ತರ ದರದಲ್ಲಿ

(ಬಿ) ಈ ಮುಂದಿನವುಗಳ ಸಂಬಂಧದಲ್ಲಿ, ಎಂದರೆ:–

**XX XX XX**

**11. ಹೂಡುವಳಿ ತೆರಿಗೆಯ ನಿರ್ಬಂಧಗಳು.**– (ಎ) ಈ ಮುಂದಿನವುಗಳ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ನಿವ್ವಳ ತೆರಿಗೆಯನ್ನು ಲೆಕ್ಕಹಾಕುವಾಗ ಹೂಡುವಳಿ ತೆರಿಗೆಯನ್ನು ಕಡಿತಗೊಳಿಸತಕ್ಕದ್ದಲ್ಲ,–

(1) ಭಾರತದ ಸರಹದ್ದಿನ ಹೊರಗೆ ರಫ್ತು ಕ್ರಮದಲ್ಲಿ ಸರಕುಗಳನ್ನು ಮಾರಾಟ ಮಾಡಿದುದರ ಹೊರತಾಗಿ 5ನೇ ಪ್ರಕರಣದ ಅಡಿಯಲ್ಲಿ ವಿನಾಯಿತಿಸಲ್ಪಟ್ಟ ಅಂಥ ಸರಕುಗಳ ಮಾರಾಟಕ್ಕಾಗಿ ಅಥವಾ ತಯಾರಿಕೆಗಾಗಿ ಅಥವಾ ಸಂಸ್ಕರಣೆಗಾಗಿ ಅಥವಾ ಪ್ಯಾಕು ಮಾಡುವುದಕ್ಕಾಗಿ ಅಥವಾ ದಾಸ್ತಾನು ಮಾಡುವುದಕ್ಕಾಗಿ ಮಾಡಿದುದೆಂದು ಹೇಳಲಾದ ಖರೀದಿಯ ಮೇಲೆ ಸಂದಾಯ ಮಾಡಿದ ತೆರಿಗೆ;

**XX XX XX**

(ಬಿ) ಅನಿವಾಸಿ ಪ್ರಧಾನಕರ್ತನ ಹೊರತಾಗಿ ಯಾವೊಬ್ಬ ಇತರ ವ್ಯಕ್ತಿಯ ಪರವಾಗಿ ಸರಕುಗಳನ್ನು ಖರೀದಿಸುವ ಅಥವಾ ಮಾರಾಟ ಮಾಡುವ ಒಬ್ಬ ಏಜೆಂಟನು ಹೂಡುವಳಿ ತೆರಿಗೆಯನ್ನು ಕಡಿತಗೊಳಿಸತಕ್ಕದ್ದಲ್ಲ.

(ಸಿ) ಭಾಗಶ: ಅಥವಾ ಪೂರ್ಣವಾಗಿ ಕಾಮಗಾರಿ ಕರಾರುಗಳನ್ನು ತನಗಾಗಿ ನಿರ್ವಹಿಸಿದಕ್ಕೆ ಪ್ರತಿಫಲವಾಗಿ ಯಾವೊಬ್ಬ ಉಪಕರಾರುದಾರನಿಗೆ ಸಂದಾಯ ಮಾಡಿದ ಅಥವಾ ಸಂದಾಯ ಮಾಡತಕ್ಕ ಯಾವುದೇ ಮೊಬಲಿಗಿನ ಮೇಲೆ ಕಡಿತವನ್ನು ಕ್ಲೇಮು ಮಾಡುವ ಕಾಮಗಾರಿಗಳ ಕರಾರನ್ನು ನಿರ್ವಹಿಸುವ ಯಾವೊಬ್ಬ ವ್ಯಾಪಾರಿಯು ಅಂಥ ಮೊಬಲಗಿನ ಸಂಬಂಧದ ಹೂಡುವಳಿ ತೆರಿಗೆಯನ್ನು ಕಡಿತಗೊಳಿಸತಕ್ಕದ್ದಲ್ಲ.

**XX XX XX**

**18ಎ. ಕೆಲವು ಸರಕುಗಳ ಸಂಬಂಧದಲ್ಲಿ ಮೂಲದಲ್ಲಿಯೇ ತೆರಿಗೆಯನ್ನು ಮುರಿದುಕೊಳ್ಳುವುದು.–** (1) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಉತ್ಪಾದನೆ ಅಥವಾ ಸಂಸ್ಕರಣೆಯಲ್ಲಿ ಬಳಸುವುದಕ್ಕಾಗಿ ಅಥವಾ ಆಯುಕ್ತರು ಅಧಿಸೂಚಿಸಬಹುದಾದಂತೆ ಯಾವುದೇ ಇತರ ಉದ್ದೇಶಕ್ಕಾಗಿ ಬಳಸುವುದಕ್ಕಾಗಿ ಎಣ್ಣೆಬೀಜಗಳು ಅಥವಾ ಕಚ್ಚಾ ಎಣ್ಣೆ ಅಥವಾ ಹಿಂಡಿ ಅಥವಾ ಕಬ್ಬಿಣದ ಮತ್ತು ಉಕ್ಕಿನ ಸ್ಕ್ರಾಪ್‌ಗಳು ಅಥವಾ ಆಯುಕ್ತರು ಅಧಿಸೂಚಿಸಬಹುದಾದ ಯಾವುವೇ ಇತರ ಸರಕುಗಳನ್ನು ಖರೀದಿಸುವ ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿಯು, ಅಂಥ ಸರಕುಗಳನ್ನು ತನಗೆ ಮಾರಾಟ ಮಾಡಿದ ನೋಂದಾಯಿತ ವ್ಯಾಪಾರಿಗೆ ತಾನು ಸಂದಾಯಮಾಡತಕ್ಕ ಮೊಬಲಗಿನಿಂದ, 4ನೇ ಪ್ರಕರಣದ ಅಡಿಯಲ್ಲಿ ಆ ಸರಕುಗಳ ಮಾರಾಟದ ಮೇಲೆ ಸಂದಾಯಮಾಡತಕ್ಕ ತೆರಿಗೆಗೆ ಸಮನಾದ ಮೊಬಲಗನ್ನು ಮುರಿದುಕೊಳ್ಳತಕ್ಕದ್ದು.

(2) ಯಾವುವೇ ಸರಕುಗಳ ಸಂಬಂಧದಲ್ಲಿ ಅವರು ಸಂದಾಯಮಾಡತಕ್ಕ ಮೊಬಲಗು, ಅಂತರರಾಜ್ಯ ವ್ಯಾಪಾರ ಅಥವಾ ವಾಣಿಜ್ಯಕ್ಕೆ ಸಂಬಂಧಿಸಿದ್ದರೆ ಅಥವಾ ಭಾರತದ ಸರಹದ್ದುಗಳಿಂದ ಹೊರಕ್ಕೆ ರಫ್ತಿಗೆ ಅಥವಾ ಭಾರತದ ಸರಹದ್ದುಗಳೊಳಕ್ಕೆ ಆಮದಿಗೆ ಅಥವಾ ರಾಜ್ಯದ ಹೊರಗೆ ಮಾರಾಟಕ್ಕೆ ಸಂಬಂಧಿಸಿದ್ದರೆ, (1)ನೇ ಉಪ ಪ್ರಕರಣದ ಅಡಿಯಲ್ಲಿ ಯಾವುದೇ ಮುರುಗಡೆಯನ್ನು ಮಾಡತಕ್ಕದ್ದಲ್ಲ.

(3) ವ್ಯಾಪಾರಿಯು, (1)ನೇ ಉಪಪ್ರಕರಣದ ಅಡಿಯಲ್ಲಿ ಮುರುಗಡೆಯನ್ನು, ಮಾರಾಟ ಮಾಡಿದ ವ್ಯಾಪಾರಿಯು ನೀಡಿದ ತೆರಿಗೆ ದರಪಟ್ಟಿಯ ಆಧಾರದ ಮೇಲೆ ಮಾಡತಕ್ಕದ್ದು.

(4) (1)ನೇ ಉಪ ಪ್ರಕರಣದ ಅಡಿಯಲ್ಲಿ ತೆರಿಗೆ ಮುರಿದುಕೊಳ್ಳುತ್ತಿರುವ ವ್ಯಾಪಾರಿಯು ತಾನು ಹಿಂದಿನ ತಿಂಗಳಲ್ಲಿ ಮುರುಗಡೆ ಮಾಡಿದ ತೆರಿಗೆಯ ವಿವರಗಳನ್ನು ಒಳಗೊಂಡ ನಿಯಮಿಸಲಾದ ನಮೂನೆಯಲ್ಲಿರುವ ಒಂದು ವಿವರಪಟ್ಟಿಯನ್ನು ನಿಯಮಿಸಲಾದ ಪ್ರಾಧಿಕಾರಕ್ಕೆ ಪ್ರತಿ ತಿಂಗಳೂ ಕಳುಹಿಸತಕ್ಕದ್ದು ಮತ್ತು ಹಾಗೆ ತಾನು ಮುರಿದುಕೊಂಡ ತೆರಿಗೆಯ ಮೊಬಲಗನ್ನು ಯಾವ ತಿಂಗಳಲ್ಲಿ ಅಂಥ ಮುರುಗಡೆಯನ್ನು ಮಾಡಲಾಗಿದೆಯೋ ಆ ಹಿಂದಿನ ತಿಂಗಳು ಮುಕ್ತಾಯವಾದ ತರುವಾಯ ಇಪ್ಪತ್ತು ದಿನಗಳ ಒಳಗೆ ಹಿಂದಿನ ತಿಂಗಳಿಗಾಗಿ ತಾನು ಸಂದಾಯ ಮಾಡಬೇಕಾಗಿದ್ದ ಯಾವುದೇ ನಿವ್ವಳ ತೆರಿಗೆಗೆ ಸಂಬಂಧಿಸಿದಂತೆ ತಾನು ಹಾಗೆ ಮುರಿದುಕೊಂಡ ತೆರಿಗೆಯ ಮೊಬಲಗನ್ನು ಸರಿಹೊಂದಿಸಿದ ತರುವಾಯ ಸಂದಾಯಮಾಡತಕ್ಕದ್ದು ಮತ್ತು ಹಾಗೆ ಸಂದಾಯಮಾಡತಕ್ಕ ಮೊಬಲಗನ್ನು 42ನೇ ಪ್ರಕರಣದ ಉದ್ದೇಶಗಳಿಗಾಗಿ ಈ ಅಧಿನಿಯಮದ ಅಡಿಯಲ್ಲಿ ಬಾಕಿ ಇರುವ ಮೊಬಲಗು ಎಂದು ಭಾವಿಸತಕ್ಕದ್ದು.

(5) (4)ನೇ ಉಪ–ಪ್ರಕರಣದ ಉಪಬಂಧಗಳನ್ನು ಪಾಲಿಸಲು ತಪ್ಪಿದರೆ ನಿಯಮಿಸಲಾದ ಪ್ರಾಧಿಕಾರಿಯು ತಾನು ಸೂಕ್ತವೆಂದು ಭಾವಿಸಿದಂಥ ವಿಚಾರಣೆಯನ್ನು ನಡೆಸಿದ ತರುವಾಯ ಮತ್ತು ಸಂಬಂಧಪಟ್ಟ ವ್ಯಾಪಾರಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡಿದ ತರುವಾಯ, ತನ್ನ ಅತ್ಯುತ್ತಮ ವಿವೇಚನೆಗನುಸಾರ ಅಂಥ 2005: ಕರ್ನಾಟಕ ಆ್ಯಕ್ಟ್ 32] ಮೌಲ್ಯವರ್ಧಿತ ತೆರಿಗೆ 662 ವ್ಯಾಪಾರಿಯು ಈ ಉಪಪ್ರಕರಣದ ಅಡಿಯಲ್ಲಿ ಸಂದಾಯ ಮಾಡತಕ್ಕ ಮೊಬಲಗನ್ನು ನಿರ್ಧರಿಸಬಹುದು ಮತ್ತು ಹಾಗೆ ನಿರ್ಧರಿಸಿದ ಮೊಬಲಗನ್ನು 42ನೇ ಪ್ರಕರಣದ ಉದ್ದೇಶಕ್ಕಾಗಿ ಈ ಅಧಿನಿಯಮದ ಅಡಿಯಲ್ಲಿ ಬಾಕಿಯಿರುವ ಮೊಬಲಗೆಂದು ಭಾವಿಸತಕ್ಕದ್ದು.

(6) (4)ನೇ ಉಪಪ್ರಕರಣದ ಅಡಿಯಲ್ಲಿ ನಿರ್ದಿಷ್ಟಪಡಿಸಿದ ಅವಧಿಯನ್ನು ಮೀರಿ, ಮುರಿದುಕೊಂಡ ತೆರಿಗೆಯನ್ನು ಸಂದಾಯ ಮಾಡುವಲ್ಲಿ ತಪ್ಪಿದರೆ (1)ನೇ ಉಪಪ್ರಕರಣದ ಅಡಿಯಲ್ಲಿ ಮುರುಗಡೆ ಮಾಡುವ ವ್ಯಾಪಾರಿಯು, ಅಂಥ ತಪ್ಪು ಮುಂದುವರಿದ ಅವಧಿಯಲ್ಲಿ 37ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ನಿರ್ದಿಷ್ಟಪಡಿಸಲಾದ ಬಡ್ಡಿಗೆ ಸಮನಾದ ಮೊತ್ತವನ್ನು ಬಡ್ಡಿಯ ರೂಪದಲ್ಲಿ ಸಂದಾಯ ಮಾಡತಕ್ಕದ್ದು.

(7) (1)ನೇ ಉಪ–ಪ್ರಕರಣದಡಿಯಲ್ಲಿ ತೆರಿಗೆ ಮುರಿದುಕೊಳ್ಳುತ್ತಿರುವ ವ್ಯಾಪಾರಿಯು ಯಾರಿಂದ ಹಾಗೆ ತೆರಿಗೆ ಮುರಿದುಕೊಳ್ಳಲಾಗುತ್ತಿದೆಯೋ ಆ ವ್ಯಾಪಾರಿಗೆ ನಿಯಮಿಸಬಹುದಾದಂಥ ವಿವರಗಳನ್ನು ಒಳಗೊಂಡ, ನಿಯಮಿಸಲಾದ ಪ್ರಾಧಿಕಾರಿಯಿಂದ ಪಡೆದುಕೊಳ್ಳಲಾದ ಒಂದು ಪ್ರಮಾಣ ಪತ್ರವನ್ನು ಒದಗಿಸತಕ್ಕದ್ದು.

(8) (4)ನೇ ಉಪಪ್ರಕರಣಕ್ಕನುಸಾರವಾಗಿ ತೆರಿಗೆ ಮುರಿದುಕೊಂಡು ಮಾಡಿದ ಸಂದಾಯವು, ಈ ಅಧಿನಿಯಮದ ಅಡಿಯಲ್ಲಿ ಬಾಕಿ ಇರುವ ತೆರಿಗೆಯನ್ನು ಮಾರಾಟ ಮಾಡುವ ವ್ಯಾಪಾರಿಯಿಂದ ಇತರ ಯಾವುದೇ ವಿಧಾನದಲ್ಲಿ ವಸೂಲು ಮಾಡಿಕೊಳ್ಳುವುದಕ್ಕೆ ಪ್ರತಿಕೂಲವಾಗಿರತಕ್ಕದ್ದಲ್ಲ.

(9) (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಸರಕುಗಳ ಅವನ ವ್ಯಾಪಾರದ ಸಂಬಂಧದಲ್ಲಿ ತೆರಿಗೆಯನ್ನು (4)ನೇ ಉಪ–ಪ್ರಕರಣದ ಅಡಿಯಲ್ಲಿ ಜಮಾ ಮಾಡಿದ್ದರೆ ಅಂಥ ಮಾರಾಟ ಮಾಡುವ ವ್ಯಾಪಾರಿಯು ಅಂಥ ಮಾರಾಟಗಳ ಸಂಬಂಧದಲ್ಲಿ ಯಾವುದೇ ಅವಧಿಗಾಗಿ ಸಂದಾಯ ಮಾಡತಕ್ಕ ತೆರಿಗೆಯಿಂದ ಸದರಿ ಉಪಪ್ರಕರಣದಡಿಯಲ್ಲಿ ಈಗಾಗಲೇ ಜಮಾಮಾಡಿದ ತೆರಿಗೆಯ ಮೊಬಲಗಷ್ಟನ್ನು ಕಳೆಯತಕ್ಕದ್ದು.

(10) ಅಂಥ ಮಾರಾಟದ ಮೇಲೆ ಈಗಾಗಲೇ ತೆರಿಗೆಯನ್ನು ಜಮಾಮಾಡಲಾಗಿದೆ ಎಂದು ಮತ್ತು ಹಾಗೆ ಜಮಾಮಾಡಿದ ತೆರಿಗೆಯ ಸರಿಯಾದ ಮೊಬಲಗು ಎಷ್ಟು ಎಂಬುದನ್ನು ರುಜುವಾತುಪಡಿಸುವ ಹೊಣೆಯು ಹಾಗೆ ತೆರಿಗೆ ಕಳೆಯಬೇಕೆಂದು ಕ್ಲೇಮುಮಾಡುವ ವ್ಯಾಪಾರಿಯ ಮೇಲಿರತಕ್ಕದ್ದು.

**XX** **XX** **XX**

**30. ಜಮೆ ಮತ್ತು ಖರ್ಚು ಚೀಟಿಗಳು.–** (1) ಯಾವುವೇ ಸರಕುಗಳ ಮಾರಾಟಕ್ಕಾಗಿ ಒಂದು ತೆರಿಗೆ ಬೆಲೆ ಪಟ್ಟಿಯನ್ನು ನೀಡಲಾಗಿದ್ದರೆ ಮತ್ತು ಅಂಥ ಮಾರಾಟದ ದಿನಾಂಕದಿಂದ ಆರು ತಿಂಗಳೊಳಗೆ ಆ ತೆರಿಗೆ ಬೆಲೆ ಪಟ್ಟಿಯಲ್ಲಿ ವಿಧಿಸಲಾದ ತೆರಿಗೆ ಎಂಬುದಾಗಿ ತೋರಿಸಿದ ಮೊಬಲಗು ಮಾರಾಟವನ್ನು ಮಾಡಿದ್ದರ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ತೆರಿಗೆಯನ್ನು ಮೀರಿರುವುದಾಗಿ ಕಂಡುಬಂದರೆ, ಅಥವಾ ಮಾರಾಟಮಾಡಿದ ಸರಕನ್ನು ನಿಯಮಿಸಲಾದ ಅವಧಿಯೊಳಗೆ ಹಿಂತಿರುಗಿಸಿರುವ ಕಾರಣದಿಂದಾಗಿ ಯಾವುದೇ ತೆರಿಗೆ ಸಂದಾಯವಾಗಬೇಕಾಗಿರದಿದ್ದರೆ ಮಾರಾಟ ಮಾಡುವ

ನೋಂದಾಯಿತ ವ್ಯಾಪಾರಿಯು, ನಿಯಮಿಸಬಹುದಾದಂತೆ ವಿವರಗಳನ್ನೊಳಗೊಂಡ ಒಂದು ಜಮೆ ಚೀಟಿಯನ್ನು ಖರೀದಿದಾರನಿಗೆ ತತ್‌ಕ್ಷಣವೇ ನೀಡತಕ್ಕದ್ದು.

(2) ಯಾವುವೇ ಸರಕುಗಳನ್ನು ಮಾರಾಟ ಮಾಡಿದ್ದಕ್ಕಾಗಿ ಒಂದು ತೆರಿಗೆ ಬೆಲೆಪಟ್ಟಿಯನ್ನು ನೀಡಿದ್ದರೆ ಮತ್ತು ಮಾರಾಟದ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ತೆರಿಗೆಯು, ಆ ತೆರಿಗೆ ಬೆಲೆ ಪಟ್ಟಿಯಲ್ಲಿ ತೋರಿಸಲಾದ ತೆರಿಗೆ ಎಂಬುದಾಗಿ ವಿಧಿಸಲಾದ ಮೊಬಲಗನ್ನು ಮೀರಿದ್ದರೆ, ಮಾರಾಟ ಮಾಡಿದ ನೋಂದಾಯಿತ ವ್ಯಾಪಾರಿಯು, ನಿಯಮಿಸಬಹುದಾದಂತೆ ವಿವರಗಳನ್ನೊಳಗೊಂಡ ಖರ್ಚು ಚೀಟಿಯನ್ನು ಖರೀದಿದಾರನಿಗೆ ನೀಡತಕ್ಕದ್ದು.

(3) ಜಮೆ ಚೀಟಿಗಳು ಅಥವಾ ಖರ್ಚು ಚೀಟಿಗಳನ್ನು ಸ್ವೀಕರಿಸಿದ ಅಥವಾ ನೀಡಿದ ಯಾವೊಬ್ಬ ನೋಂದಾಯಿತ ವ್ಯಾಪಾರಿಯು, ಜಮೆ ಚೀಟಿಗಳನ್ನು ಸ್ವೀಕರಿಸಿದ ಅಥವಾ ಖರ್ಚಿನ ಮೌಲ್ಯವರ್ಧಿತ ತೆರಿಗೆ 673 ಚೀಟಿಗಳನ್ನು ನೀಡಿದ ತೆರಿಗೆ ಅವಧಿಗಾಗಿ ಮಂಡಿಸುವ ವಿವರ ಪಟ್ಟಿಯಲ್ಲಿ ಅವುಗಳನ್ನು ಘೋಷಿಸತಕ್ಕದ್ದು ಮತ್ತು ಅದರ ಮೇಲೆ ತೆರಿಗೆ ಕಡಿತವನ್ನು ಕ್ಲೇಮು ಮಾಡತಕ್ಕದ್ದು ಅಥವಾ ತೆರಿಗೆಯನ್ನು ಸಂದಾಯಮಾಡತಕ್ಕದ್ದು.

(4) ಯಾವುದೇ ಕಾನೂನಿನ ಅಡಿಯಲ್ಲಿ ಅಗತ್ಯಪಡಿಸಲಾದಂತೆ ನೋಂದಾಯಿತ ವ್ಯಾಪಾರಿಯು ನೀಡಿದ ನಿಯಮಿಸಲಾದಂಥ ಜಮೆ ಚೀಟಿ ಅಥವಾ ಖರ್ಚು ಚೀಟಿಯ ವಿವರಗಳನ್ನು ಒಳಗೊಂಡ ಯಾವುದೇ ದಾಖಲೆಯನ್ನು ಈ ಪ್ರಕರಣದ ಉದ್ದೇಶಗಳಿಗಾಗಿ ಜಮೆ ಅಥವಾ ಖರ್ಚು ಚೀಟಿ ಎಂದು ಭಾವಿಸತಕ್ಕದ್ದು.

**XX** **XX** **XX**

**35. ವಿವರ ಪಟ್ಟಿಗಳು.-** (1) (2) ರಿಂದ (4)ನೇ ಉಪಪ್ರಕರಣಗಳಿಗೆ ಒಳಪಟ್ಟು ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿಯು ಮತ್ತು 9ನೇ ಪ್ರಕರಣದ (2)ನೇ ಉಪ-ಪ್ರಕರಣದ 2005: ಕರ್ನಾಟಕ ಆ್ಯಕ್ಟ್ 32] ಮೌಲ್ಯವರ್ಧಿತ ತೆರಿಗೆ 676 ಅಡಿಯಲ್ಲಿ ಸಂಗ್ರಹಿಸಲಾದ ತೆರಿಗೆ ಸಂದಾಯಕ್ಕೆ ಬದ್ಧವಾದ ಕೇಂದ್ರ ಸರ್ಕಾರ, ಒಂದು ರಾಜ್ಯ ಸರ್ಕಾರ, ಶಾಸನಬದ್ಧ ನಿಕಾಯ ಮತ್ತು ಒಂದು ಸ್ಥಳೀಯ ಪ್ರಾಧಿಕಾರವು ಎಲೆಕ್ಟ್ರಾನಿಕ್ ವಿಧಾನಗಳು ಸೇರಿದಂತೆ ಅಂಥ ನಮೂನೆಯಲ್ಲಿ ಮತ್ತು ವಿಧಾನದಲ್ಲಿ ಒಂದು ವಿವರ ಪಟ್ಟಿಯನ್ನು ಒದಗಿಸತಕ್ಕದ್ದು ಮತ್ತು ನಿಯಮಿಸಬಹುದಾದಂತೆ ಹಿಂದಿನ ತಿಂಗಳ ಕೊನೆಯ ತರುವಾಯದ ಇಪ್ಪತ್ತು ದಿನಗಳೊಳಗೆ ಅಥವಾ ಹದಿನೈದು ದಿನಗಳೊಳಗೆ ಅಥವಾ ಇತರೆ ಯಾವುದೇ ತೆರಿಗೆ ಅವಧಿಯೊಳಗೆ ಅಂಥ ವಿವರ ಪಟ್ಟಿಯ ಮೇಲೆ ಬಾಕಿ ಇರುವ ತೆರಿಗೆಯನ್ನು ಸಂದಾಯ ಮಾಡತಕ್ಕದ್ದು:

ಪರಂತು, ನಿರ್ದಿಷ್ಟಪಡಿಸಲಾದ ವರ್ಗದ ವ್ಯಾಪಾರಿಗಳು, ಆಯುಕ್ತರು ಅಧಿಸೂಚಿಸಬಹುದಾದಂತೆ ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ವಿದ್ಯುನ್ಮಾನ ವಿಧಾನದಲ್ಲಿ, ಅಂತರ್ಜಾಲ ಮೂಲಕ ನಿಯಮಿಸಲಾದ ನಮೂನೆಯಲ್ಲಿ ವಿವರ ಪಟ್ಟಿಗಳನ್ನು ತಯಾರಿಸಲು ವಿವರಗಳನ್ನು ಒದಗಿಸತಕ್ಕದ್ದು ಅಥವಾ ನಿಯಮಿಸಲಾದ ನಮೂನೆಯಲ್ಲಿ ವಿವರ ಪಟ್ಟಿಗಳನ್ನು ಸಲ್ಲಿಸತಕ್ಕದ್ದು;

ಮತ್ತು ಪರಂತು, ನಿರ್ದಿಷ್ಟಪಡಿಸಿದ ವರ್ಗದ ವ್ಯಾಪಾರಿಗಳು, ಆಯುಕ್ತರು ಅಧಿಸೂಚಿಸಬಹುದಾದಂತೆ ವಿವರ ಪಟ್ಟಿಗಳ ಆಧಾರದ ಮೇಲೆ ತೆರಿಗೆಯನ್ನು, ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ವಿಧಾನದಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲ ಮೂಲಕ ಸಂದಾಯ ಮಾಡತಕ್ಕದ್ದು.

(2) ಒದಗಿಸಲಾದ ವಿವರ ಪಟ್ಟಿಯಲ್ಲಿ ಘೋಷಿಸಲಾದ ಸರಕುಗಳ ಯಾವುದೇ ಮಾರಾಟ ಅಥವಾ ಖರೀದಿಯ ಮೇಲಿನ ತೆರಿಗೆಯನ್ನು, ಅಂಥ ತೆರಿಗೆಯ ಸಂದಾಯಕ್ಕಾಗಿ ನೋಟೀಸನ್ನು ನೀಡುವ ಅಗತ್ಯವಿಲ್ಲದಂತೆ, (1)ನೇ ಉಪ-ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅವಧಿಯ ಮುಕ್ತಾಯವಾದಾಗ ಸಂದಾಯ ಮಾಡತಕ್ಕದ್ದು.

(3) ನಿರ್ದಿಷ್ಟಪಡಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು, ನಿಯಮಿಸಲಾದ ಪ್ರಾಧಿಕಾರವು ಯಾವೊಬ್ಬ ನೋಂದಾಯಿತ ವ್ಯಾಪಾರಿಯನ್ನು,-

(ಎ) ಅಂಥ ಅವಧಿಗಳಿಗಾಗಿ ಒಂದು ವಿವರ ಪಟ್ಟಿಯನ್ನು ಸಲ್ಲಿಸಲು; ಅಥವಾ

(ಬಿ) ನೋಂದಾಯಿತ ವ್ಯಾಪಾರಿಯು ಒಂದಕ್ಕಿಂತ ಹೆಚ್ಚಿನ ವ್ಯಾಪಾರ ಸ್ಥಳಗಳನ್ನು

ಹೊಂದಿರುವಲ್ಲಿ, ಪ್ರತ್ಯೇಕ ಶಾಖಾ ವಿವರ ಪಟ್ಟಿಗಳನ್ನು ಒದಗಿಸಲು,

- ಅಗತ್ಯಪಡಿಸಬಹುದು.

(4) 38ನೇ ಪ್ರಕರಣದ (3)ನೇ ಉಪ-ಪ್ರಕರಣದ ಅಡಿಯಲ್ಲಿ ಒದಗಿಸಲಾದ ವಿವರ ಪಟ್ಟಿಯನ್ನು ಹೊರತುಪಡಿಸಿ, ಈ ಅಧಿನಿಯಮದ ಅಡಿಯಲ್ಲಿ ಒಂದು ವಿವರ ಪಟ್ಟಿಯನ್ನು ನೀಡಿರುವ ಯಾವೊಬ್ಬ ವ್ಯಾಪಾರಿಯು, ನಿಯಮಿಸಲಾದ ಪ್ರಾಧಿಕಾರವು ಮಾಡಿದ ತಪಾಸಣೆಯ ಅಥವಾ ಇತರ 2005: ಕರ್ನಾಟಕ ಆ್ಯಕ್ಟ್ 32] ಮೌಲ್ಯವರ್ಧಿತ ತೆರಿಗೆ 677 ಯಾವುದೇ ಮಾಹಿತಿ ಅಥವಾ ಸಾಕ್ಷ್ಯದ ಸ್ವೀಕೃತಿಯ ಕಾರಣದ ಹೊರತಾಗಿ ಯಾವುದೇ ಲೋಪ ಅಥವಾ ತಪ್ಪು ಹೇಳಿಕೆಯನ್ನು ಕಂಡು ಹಿಡಿದರೆ ಅವನು 72ನೇ ಪ್ರಕರಣದ (2)ನೇ ಉಪ-ಪ್ರಕರಣಕ್ಕೆ ಒಳಪಟ್ಟು 30ನೇ ಪ್ರಕರಣದ ಅಡಿಯಲ್ಲಿ ನೀಡಲಾದ ಖರ್ಚು ಪಟ್ಟಿಗೆ ಅನುಸಾರವಾಗಿ ಪರಿಷ್ಕೃತ ವಿವರ ಪಟ್ಟಿಯನ್ನು ಒದಗಿಸಿದ್ದ ಹೊರತು, ತೆರಿಗೆ ಅವಧಿಯ ಕೊನೆಯಿಂದ ಆರು ತಿಂಗಳೊಳಗೆ ಒಂದು ಪರಿಷ್ಕೃತ ವಿವರ ಪಟ್ಟಿಯನ್ನು ಒದಗಿಸತಕ್ಕದ್ದು.

**XX** **XX** **XX**

**40. ತೆರಿಗೆ ನಿರ್ಧರಣೆಗಾಗಿ ಕಾಲಮಿತಿ.**– (1) ಯಾವುದೇ ನಿಯಮಿಸಲಾದ ತೆರಿಗೆ ಅವಧಿಗಾಗಿ ಬಾಕಿ ತೆರಿಗೆಯ ಮೊಬಲಗಿನ ಸಂಬಂಧದಲ್ಲಿ 38ನೇ ಪ್ರಕರಣದ ಅಡಿಯಲ್ಲಿ ತೆರಿಗೆ ನಿರ್ಧರಣೆಯನ್ನು ಅಥವಾ 39ನೇ ಪ್ರಕರಣದ ಅಡಿಯಲ್ಲಿ ತೆರಿಗೆಯ ಮರು ನಿರ್ಧರಣೆಯನ್ನು ಈ ಮುಂದಿನ ಕಾಲಮಿತಿಯ ತರುವಾಯ ಮಾಡತಕ್ಕದ್ದಲ್ಲ, ಎಂದರೆ:–

(ಎ) ನಿಯಮಿಸಲಾದ ತೆರಿಗೆ ಅವಧಿಯ ಮುಕ್ತಾಯದ ತರುವಾಯದ ನಾಲ್ಕು ವರ್ಷಗಳು; ಅಥವಾ

(ಬಿ) ನಿಯಮಿಸಲಾದ ಪ್ರಾಧಿಕಾರದ ಅಭಿಪ್ರಾಯದಲ್ಲಿ, ತೆರಿಗೆಯ ಮರು ನಿರ್ಧರಣೆ ಮಾಡುವುದನ್ನು ಸಮರ್ಥಿಸುವ ಸಂಗತಿಗಳ ಸಾಕ್ಷ್ಯವು ಸಾಕಷ್ಟಿದೆ ಎಂದು ಅದರ ಗಮನಕ್ಕೆ ಬಂದ ತರುವಾಯ ಮೂರು ವರ್ಷಗಳು;

– ಇವುಗಳಲ್ಲಿ ಯಾವುದು ನಂತರದ್ದೋ ಅದು.

ಪರಂತು, 2007ರ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಯಾವುದೇ ತೆರಿಗೆಯ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆ ಅಥವಾ ತೆರಿಗೆಯ ಮರು ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆಯ ಅವಧಿಯು ಕೊನೆಗೊಂಡ ತರುವಾಯ ಐದು ವರ್ಷಗಳ ಅವಧಿಯೊಳಗೆ ಮಾಡತಕ್ಕದ್ದು.

(2) ನೋಂದಾಯಿತನಾಗಲು ಬದ್ಧನಾಗಿದ್ದಾಗ್ಯೂ ಹಾಗೆ ಮಾಡಲು ತಪ್ಪಿದ ಒಬ್ಬ ವ್ಯಾಪಾರಿಯು ಯಾವುದೇ ತೆರಿಗೆ ಸಂದಾಯಮಾಡಲು ತಪ್ಪಿದರೆ ಅಥವಾ 79ನೇ ಪ್ರಕರಣದ ಅಡಿಯಲ್ಲಿ ಶಿಕ್ಷೆಗೆ ಗುರಿಯಾಗುವುದನ್ನು ಮೋಸದಿಂದ ತಪ್ಪಿಸಿಕೊಂಡರೆ (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ನಾಲ್ಕು ವರ್ಷಗಳಿಗೆ ಎಂಬುದನ್ನು ಎಂಟು ವರ್ಷಗಳಿಗೆ ಎಂದು ಉಲ್ಲೇಖಿಸಿದ್ದರೆ ಹೇಗೋ ಹಾಗೆ ತೆರಿಗೆ ನಿರ್ಧರಣೆಯನ್ನು ಮಾಡಬಹುದು ಅಥವಾ ಮರು ನಿರ್ಧರಣೆಯನ್ನು ಮಾಡಬಹುದು.

**xx xx xx**

**53. ಚೆಕ್‌ಪೋಸ್ಟ್‌ಗಳ ಸ್ಥಾಪನೆ ಮತ್ತು ಸಾಗಣೆಯಲ್ಲಿರುವ ಸರಕುಗಳ ಪರಿಶೀಲನೆ.**– (1) ರಾಜ್ಯದಲ್ಲಿನ ಯಾವುದೇ ಸ್ಥಳ ಅಥವಾ ಸ್ಥಳಗಳಲ್ಲಿ, ಈ ಅಧಿನಿಯಮದ ಅಡಿಯಲ್ಲಿ ತೆರಿಗೆಯನ್ನು ತಪ್ಪಿಸುವುದನ್ನು ತಡೆಹಿಡಿಯುವ ಅಥವಾ ಪ್ರತಿಬಂಧಿಸುವ ದೃಷ್ಟಿಯಿಂದ ರಾಜ್ಯ ಸರ್ಕಾರ ಅಥವಾ ಆಯುಕ್ತನು ಅವಶ್ಯಕವೆಂದು ಪರಿಗಣಿಸಿದಲ್ಲಿ ಅದು ಅಥವಾ ಅವನು, ಅಧಿಸೂಚಿಸಬಹುದಾದಂತೆ ಅಂಥ ಸ್ಥಳ ಅಥವಾ ಸ್ಥಳಗಳಲ್ಲಿ ಚೆಕ್‌ಪೋಸ್ಟ್‌ನ್ನು ಅಥವಾ ಸುಂಕದ ಕಟ್ಟೆಯನ್ನು ಅಥವಾ ಅವೆರಡನ್ನು ಸ್ಥಾಪಿಸುವಂತೆ ಅಧಿಸೂಚನೆಯ ಮೂಲಕ, ನಿರ್ದೇಶಿಸಬಹುದು.

(2) ಒಂದು ಸರಕು ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯ ಮಾಲೀಕ ಅಥವಾ ಪ್ರಭಾರ ಹೊಂದಿದ ವ್ಯಕ್ತಿಯು,–

(ಎ) ತನ್ನ ಜೊತೆಯಲ್ಲಿ ಸಂದರ್ಭಾನುಸಾರ ಸರಕು ವಾಹನದ ದಾಖಲೆ, ಟ್ರಿಪ್‌ಶೀಟ್ ಅಥವಾ ಲಾಗ್ ಪುಸ್ತಕವನ್ನು ಒಯ್ಯತಕ್ಕದ್ದು; ಮತ್ತು

(ಬಿ) ಸರಕುಗಳ ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯಲ್ಲಿ ಸಾಗಿಸುತ್ತಿರುವ ಸರಕುಗಳಿಗೆ ಸಂಬಂಧಪಟ್ಟಂತೆ, ನಿಯಮಿಸಬಹುದಾದಂಥ ಅಥವಾ ಆಯುಕ್ತರು ಅಧಿಸೂಚಿಸಬಹುದಾದಂತೆ ದಸ್ತಾವೇಜುಗಳನ್ನು ತನ್ನ ಜೊತೆಯಲ್ಲಿ ತೆಗೆದುಕೊಂಡು ಒಯ್ಯತಕ್ಕದ್ದು; ಮತ್ತು

(ಸಿ) ತಾನು ಹೋಗಬೇಕಾದ ಸ್ಥಳಕ್ಕೆ ಸರಕಿನ ಸಾಗಣೆಯು ರಾಜ್ಯದಲ್ಲಿನ ಯಾವ ಸ್ಥಳದಿಂದ ಪ್ರಾರಂಭವಾಗುತ್ತದೋ ಆ ಸ್ಥಳದಿಂದ ಸಾಧಾರಣವಾಗಿ ಸಾಗುವ ಮಾರ್ಗದಲ್ಲಿ ಇರುವಂಥ ಮೊದಲ ಚೆಕ್‌ಪೋಸ್ಟ್‌ನಲ್ಲಿ ಅಥವಾ ಸುಂಕದ ಕಟ್ಟೆಯಲ್ಲಿ ಸದರಿ ಚೆಕ್‌ಪೋಸ್ಟಿನ ಅಥವಾ ಸುಂಕದ ಕಟ್ಟೆಯ ಪ್ರಭಾರದಲ್ಲಿರುವ ಯಾವೊಬ್ಬ ಅಧಿಕಾರಿಯ ಅಥವಾ ಇದಕ್ಕಾಗಿಯೇ ರಾಜ್ಯ ಸರ್ಕಾರದಿಂದ ಅಥವಾ ಆಯುಕ್ತರಿಂದ ಪ್ರಾಧಿಕೃತನಾಗಬಹುದಾದ ಯಾವೊಬ್ಬ ಇತರ ಅಧಿಕಾರಿಯ ಎದುರಿಗೆ ವರದಿ ಮಾಡಿಕೊಳ್ಳತಕ್ಕದ್ದು ಮತ್ತು (ಎ) ಮತ್ತು (ಬಿ) ಖಂಡಗಳಲ್ಲಿ] ಉಲ್ಲೇಖಿಸಲಾದ ದಸ್ತಾವೇಜುಗಳನ್ನು ಹಾಜರುಪಡಿಸತಕ್ಕದ್ದು ಮತ್ತು ಅದರ ಮೇಲೆ ಅಂಥ ಅಧಿಕಾರಿಯ ಮೊಹರನ್ನು ಪಡೆಯತಕ್ಕದ್ದು ಮತ್ತು ಮಾರಾಟದ ಬಿಲ್ಲಿಗೆ ಸಂಬಂಧಪಟ್ಟಂತೆ ಅದರ ಒಂದು ಪ್ರತಿಯನ್ನು ನೀಡತಕ್ಕದ್ದು ಮತ್ತು ರವಾನೆ ಚೀಟಿಗೆ ಸಂಬಂಧಪಟ್ಟಂತೆ ಮೂಲಪ್ರತಿಯೆಂದು ಗುರುತಿಸಲಾದ ಒಂದು ಪ್ರತಿಯನ್ನು ಅಂಥ ಅಧಿಕಾರಿಗೆ ನೀಡತಕ್ಕದ್ದು ಮತ್ತು ಇನ್ನೊಂದು ಪ್ರತಿಯನ್ನು ಸರಕುಗಳ ಸಾಗಣೆಯು ಕೊನೆಗೊಳ್ಳುವವರೆಗೆ ತನ್ನಲ್ಲಿ ಉಳಿಸಿಕೊಳ್ಳತಕ್ಕದ್ದು; ಮತ್ತು

(ಡಿ) ರಾಜ್ಯದ ಗಡಿಯನ್ನು ಪ್ರವೇಶಿಸಿದ ಮೇಲೆ, ಅಲ್ಲಿರುವ ಮೊದಲನೇ ಚೆಕ್‌ಪೋಸ್ಟ್ ಅಥವಾ ಸುಂಕದ ಕಟ್ಟೆಯಲ್ಲಿ ವರದಿ ಮಾಡಿಕೊಳ್ಳತಕ್ಕದ್ದು ಮತ್ತು ರಾಜ್ಯದ ಗಡಿಯನ್ನು ಬಿಡುವಾಗ ಕೊನೆಯಲ್ಲಿ ಸ್ಥಾಪನೆಗೊಂಡ ಚೆಕ್‌ಪೋಸ್ಟ್ ಅಥವಾ ಸುಂಕದ ಕಟ್ಟೆಯಲ್ಲಿ ವರದಿ ಮಾಡಿಕೊಳ್ಳತಕ್ಕದ್ದು ಮತ್ತು ಚೆಕ್‌ಪೋಸ್ಟ್‌ನ ಅಥವಾ ಸುಂಕದ ಕಟ್ಟೆಯ ಪ್ರಭಾರದಲ್ಲಿರುವ ಯಾವೊಬ್ಬ ಅಧಿಕಾರಿಯ ಅಥವಾ ಈ ಬಗ್ಗೆ ರಾಜ್ಯ ಸರ್ಕಾರದಿಂದ ಅಥವಾ ಆಯುಕ್ತರಿಂದ ಪ್ರಾಧಿಕೃತನಾಗಿರಬಹುದಾದ ಯಾವೊಬ್ಬ ಇತರೆ ಅಧಿಕಾರಿಯ ಎದುರಿಗೆ, ಸರಕುಗಳ ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯಲ್ಲಿ ತೆಗೆದುಕೊಂಡು ಹೋಗುವ ಸರಕುಗಳಿಗೆ ಸಂಬಂಧಪಟ್ಟಂತೆ ನಿಯಮಿಸಬಹುದಾದಂತೆ ಅಂಥ ವಿವರಗಳನ್ನೊಳಗೊಂಡ ಒಂದು ಘೋಷಣಾ ಪತ್ರವನ್ನು ನೀಡತಕ್ಕದ್ದು; ಮತ್ತು

(ಇ) ಚೆಕ್‌ಪೋಸ್ಟ್ ಅಥವಾ ಸುಂಕದ ಕಟ್ಟೆಯ ಪ್ರಭಾರದಲ್ಲಿರುವ ಅಧಿಕಾರಿಯು ಅಥವಾ ಮೇಲೆ ಹೇಳಲಾದಂತೆ ಪ್ರಾಧಿಕೃತನಾದ ಅಧಿಕಾರಿಯು ಅಗತ್ಯಪಡಿಸಬಹುದಾದಷ್ಟು ಸಮಯದವರೆಗೆ ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯಲ್ಲಿನ ಸರಕುಗಳನ್ನು ಪರೀಕ್ಷಿಸಲು ಮತ್ತು ಸರಕುಗಳನ್ನು ತೆಗೆದುಕೊಂಡು ಹೋಗುತ್ತಿರುವುದಕ್ಕೆ ಸಂಬಂಧಪಟ್ಟಂತೆ ಅಂಥ ಚಾಲಕನ ಅಥವಾ ಪ್ರಭಾರದಲ್ಲಿರುವ ಇತರ ವ್ಯಕ್ತಿಯ ಸ್ವಾಧೀನದಲ್ಲಿರುವ ಎಲ್ಲ ದಾಖಲೆಗಳನ್ನು ಪರಿಶೀಲಿಸಲು ಸಂದರ್ಭಾನುಸಾರ ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯನ್ನು ನಿಲ್ಲಿಸತಕ್ಕದ್ದು ಮತ್ತು ಹಾಗೆ ಅಗತ್ಯಪಡಿಸಲಾದಲ್ಲಿ, ತನ್ನ ಹೆಸರು ಮತ್ತು ವಿಳಾಸ ಮತ್ತು ವಾಹನದ ಅಥವಾ 2005: ಕರ್ನಾಟಕ ಆ್ಯಕ್ಟ್ 32] ಮೌಲ್ಯ ವರ್ಧಿತ ತೆರಿಗೆ 702 ನಾವೆಯ, ಹಡಗಿನ ಅಥವಾ ಅಂಥದೇ ನೌಕೆಯ ಮಾಲೀಕನ ಹೆಸರು ಮತ್ತು ವಿಳಾಸವನ್ನು ನೀಡತಕ್ಕದ್ದು.

**ವಿವರಣೆ:–** ಈ ಪ್ರಕರಣದ (4), (8), (10) ಮತ್ತು (12)ನೇ ಉಪ ಪ್ರಕರಣಗಳ ಉದ್ದೇಶಕ್ಕಾಗಿ, "ಸಾಗಾಣೆಕಾರ" ಮತ್ತು "ಸರಕು ರಕ್ಷಕ" ಎಂಬ ಪದಾವಳಿಗಳು ಕೇಂದ್ರ ಸರ್ಕಾರವು ಅಥವಾ ಇತರರು ನಡೆಸುತ್ತಿರುವ ರೈಲ್ವೆಗಳನ್ನೂ ಒಳಗೊಳ್ಳತಕ್ಕದ್ದು ಮತ್ತು ಸಾಗಣೆಕಾರ ಅಥವಾ ಸರಕು ರಕ್ಷಕರಿಗೆ ಅನ್ವಯವಾಗುವಂಥ ಎಲ್ಲ ಉಪಬಂಧಗಳು ಯಥೋಚಿತ ಬದಲಾವಣೆಗಳೊಡನೆ ರೈಲ್ವೆಗೂ ಅನ್ವಯಿಸತಕ್ಕದ್ದು.

**XX** **XX** **XX**

**54. ರಾಜ್ಯದ ಮೂಲಕ ರಸ್ತೆ ಮಾರ್ಗವಾಗಿ ಸರಕುಗಳ ಸಾಗಣೆ ಮತ್ತು ಸಾಗಣೆ ಪಾಸ್ ನೀಡುವುದು.–** (1) ಈ ಅಧಿನಿಯಮದ ಅಡಿಯಲ್ಲಿ ತೆರಿಗೆಗೆ ಗುರಿಯಾಗುವ ಸರಕುಗಳನ್ನು ಕೊಂಡೊಯ್ಯುತ್ತಿರುವ ಒಂದು ವಾಹನವು,

(ಎ) ರಾಜ್ಯದ ಹೊರಗಿನ ಯಾವುದೇ ಸ್ಥಳದಿಂದ ಮತ್ತು ರಾಜ್ಯದ ಹೊರಗಿನ ಯಾವುದೇ ಸ್ಥಳಕ್ಕಾಗಿ ರಾಜ್ಯದ ಮೂಲಕ ಹಾದು ಹೋದರೆ; ಅಥವಾ

(ಬಿ) ದೇಶದ ಹೊರಗಿನ ಯಾವುದೇ ಸ್ಥಳದಿಂದ ರಾಜ್ಯಕ್ಕೆ ಆಮದು ಮಾಡಿಕೊಂಡರೆ ಮತ್ತು ಅಂಥ ಸರಕುಗಳನ್ನು ರಾಜ್ಯದ ಹೊರಗಿನ ಯಾವುದೇ ಸ್ಥಳಕ್ಕೆ ಕೊಂಡೊಯ್ದರೆ;

– ಅಂಥ ವಾಹನದ ಚಾಲಕ ಅಥವಾ ಅದರ ಪ್ರಭಾರದಲ್ಲಿರುವ ಯಾವೊಬ್ಬ ಇತರ ವ್ಯಕ್ತಿಯು ಅವಶ್ಯಕವಿರುವ ಮಾಹಿತಿಯನ್ನು ಒದಗಿಸತಕ್ಕದ್ದು ಮತ್ತು ನಿಯಮಿಸಬಹುದಾದ ಅಂಥ ವಿವರಗಳನ್ನು ಒಳಗೊಂಡ ಒಂದು ಸಾಗಣೆ ಪಾಸನ್ನು ದ್ವಿಪ್ರತಿಯಲ್ಲಿ, ಅವನು ರಾಜ್ಯದೊಳಗೆ ಪ್ರವೇಶಿಸಿದ ತರುವಾಯ ಅಥವಾ ಸಂದರ್ಭಾನುಸಾರ ರಾಜ್ಯದಿಂದ ಸಾಗಣೆಯು ಪ್ರಾರಂಭಗೊಂಡ ತರುವಾಯ ಮೊದಲನೇ ಚೆಕ್‌ಪೋಸ್ಟ್ ಅಥವಾ ಸುಂಕದ ಕಟ್ಟೆಯ ಅಥವಾ ಸರಕು ವಾಹನವು ರಾಜ್ಯದೊಳಕ್ಕೆ ಪ್ರವೇಶಿಸಿದ ತರುವಾಯ ತಡೆದು ನಿಲ್ಲಿಸಿದ ಮೇಲೆ ಅಥವಾ ಸಂದರ್ಭಾನುಸಾರ ಸಾಗಣೆ ಪ್ರಾರಂಭಗೊಂಡ ತರುವಾಯ, 53ನೇ ಪ್ರಕರಣದ ಉದ್ದೇಶಗಳಿಗಾಗಿ ಪ್ರಾಧಿಕೃತನಾದ ಅಧಿಕಾರಿಯಿಂದ ಪಡೆದುಕೊಳ್ಳತಕ್ಕದ್ದು.

ಪರಂತು, ವಾಹನದ ಚಾಲಕ ಅಥವಾ ಅದರ ಪ್ರಭಾರದಲ್ಲಿರುವ ಯಾವೊಬ್ಬ ಇತರ ವ್ಯಕ್ತಿಯು ಸಲ್ಲಿಸಬೇಕಾದ ಅವಶ್ಯಕ ಮಾಹಿತಿಯನ್ನು ಸಲ್ಲಿಸಬೇಕಾದ ವೆಬ್‌ಸೈಟನ್ನು ಆಯುಕ್ತನು ಅಧಿಸೂಚಿಸಬಹುದು.

(2) ಚಾಲಕ ಅಥವಾ ವಾಹನದ ಪ್ರಭಾರದಲ್ಲಿರುವ ವ್ಯಕ್ತಿಯು, ಅವನು ರಾಜ್ಯದಿಂದ ಹೊರಗೆ ಹೋಗುವುದಕ್ಕೆ ಮೊದಲು ಕೊನೆಯ ಚೆಕ್‌ಪೋಸ್ಟ್ ಅಥವಾ ಸುಂಕದ ಕಟ್ಟೆಯ ಪ್ರಭಾರದಲ್ಲಿರುವ ಅಧಿಕಾರಿಗೆ (1)ನೇ ಉಪ-ಪ್ರಕರಣದ ಅಡಿಯಲ್ಲಿ ಪಡೆದ ಸಾಗಣೆ ಪಾಸಿನ ಒಂದು ಪ್ರತಿಯನ್ನು ಗೊತ್ತುಪಡಿಸಿದ ಸಮಯದೊಳಗೆ ನೀಡತಕ್ಕದ್ದು. 2005: ಕರ್ನಾಟಕ ಆ್ಯಕ್ಟ್ 32] ಮೌಲ್ಯ ವರ್ಧಿತ ತೆರಿಗೆ 710.

**XX** **XX** **XX**

**62. ಅಪೀಲುಗಳು.–** (1) ನಿಯಮಿಸಲಾದ ಪ್ರಾಧಿಕಾರವು ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಹೊರಡಿಸಿದ ಯಾವುದೇ ಆದೇಶದಿಂದ ಅಥವಾ ವ್ಯವಹರಣೆಗಳಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಅವುಗಳನ್ನು ಆಕ್ಷೇಪಿಸಿ ಅಪೀಲು ಪ್ರಾಧಿಕಾರಕ್ಕೆ ಅಪೀಲು ಮಾಡಿಕೊಳ್ಳಬಹುದು.

(2) ಅಪೀಲನ್ನು,–

(ಎ) ತೆರಿಗೆ ನಿರ್ಧರಣೆಯ ಒಂದು ಆದೇಶಕ್ಕೆ ಸಂಬಂಧಿಸಿದಂತೆ ಅಪೀಲುದಾರನಿಗೆ ತೆರಿಗೆ ನಿರ್ಧರಣೆಯ ನೋಟೀಸನ್ನು ಜಾರಿ ಮಾಡಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ, ಮತ್ತು

(ಬಿ) ಯಾವುದೇ ಇತರ ಆದೇಶಕ್ಕೆ ಅಥವಾ ವ್ಯವಹರಣೆಗಳಿಗೆ ಸಂಬಂಧಿಸಿದಂತೆ, ಅರ್ಜಿದಾರನಿಗೆ ಆದೇಶವನ್ನು ತಿಳಿಸಿದಂಥ ದಿನಾಂಕದಿಂದ ಮೂವತ್ತು ದಿನಗಳೊಳಗೆ,

– ಹೂಡತಕ್ಕದ್ದು.

(3) ಅಪೀಲು ಪ್ರಾಧಿಕಾರವು ಈ ಹಿಂದೆ ಹೇಳಿದ ಅವಧಿಯ ತರುವಾಯ ಆದರೆ, ಒಂದು ನೂರಾ ಎಂಬತ್ತು ದಿನಗಳ ಮತ್ತಷ್ಟು ಅವಧಿಯೊಳಗೆ ಹೂಡಿದ ಅಪೀಲನ್ನು, ಆ ಅವಧಿಯೊಳಗೆ ಅಪೀಲನ್ನು ಹೂಡದೇ ಇರುವುದಕ್ಕೆ ಅಪೀಲುದಾರನಿಗೆ ಸಾಕಷ್ಟು ಕಾರಣವಿತ್ತೆಂದು ಅದಕ್ಕೆ ಮನದಟ್ಟಾದರೆ ಅಪೀಲನ್ನು ಅಂಗೀಕರಿಸಬಹುದು.

(4)(ಎ) ತೆರಿಗೆ ನಿರ್ಧರಣೆಯ ಆದೇಶದ ವಿರುದ್ಧ ಯಾವುದೇ ಅಪೀಲನ್ನು ಅದರೊಂದಿಗೆ ಅಪೀಲಿನಲ್ಲಿ ವಿವಾದಿಸದೇ ಇರುವ ತೆರಿಗೆ ಮತ್ತು ದಂಡ ಸಂದಾಯದ ಬಗ್ಗೆ ತೃಪ್ತಿಕರ ರುಜುವಾತು ಇದ್ದ ಹೊರತು ಅಪೀಲು ಪ್ರಾಧಿಕಾರಿಯು ಪುರಸ್ಕರಿಸತಕ್ಕದ್ದಲ್ಲ;

(ಬಿ) ಯಾವ ಆದೇಶದ ಅಥವಾ ವ್ಯವಹರಣೆಗಳ ವಿರುದ್ಧ ಅಪೀಲನ್ನು ಸಲ್ಲಿಸಲಾಗಿದೆಯೋ ಆ ಆದೇಶಕ್ಕೆ ಅಥವಾ ವ್ಯವಹರಣೆಗಳಿಗೆ ಅನುಸಾರವಾಗಿ ತೆರಿಗೆ ಅಥವಾ ಇತರ ಮೊಬಲಗನ್ನು ಸಂದಾಯ ಮಾಡತಕ್ಕದ್ದು;

(ಸಿ) (i) ಅಪೀಲು ಪ್ರಾಧಿಕಾರಿಯು, ತನ್ನ ವಿವೇಚನಾನುಸಾರ, ಅಪೀಲುದಾರನು ನಿಯಮಿಸಲಾದ ಅಪೀಲಿನ ನಮೂನೆಯ ಜೊತೆಯಲ್ಲಿ ತೆರಿಗೆಯ ಅರ್ಧದಷ್ಟನ್ನು ಸಂದಾಯ ಮಾಡಿದ್ದರೆ, ಇನ್ನುಳಿದ ಅರ್ಧದಷ್ಟು ತೆರಿಗೆಯ ಸಂದಾಯಕ್ಕೆ ತಡೆ ನೀಡಬಹುದು.

(ii) ಯಾವುದೇ ತೆರಿಗೆಯ ಅಥವಾ ಇತರ ಮೊಬಲಗಿನ ವಸೂಲಿಯ ವ್ಯವಹರಣೆಗಳನ್ನು ತಡೆಯುವುದಕ್ಕಾಗಿ ಅರ್ಜಿದಾರನು ಸಲ್ಲಿಸಿದ ಅರ್ಜಿಯನ್ನು ಅಪೀಲು ಪ್ರಾಧಿಕಾರವು ಅಂಥ ಅರ್ಜಿಯ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗೆ ವಿಲೆ ಮಾಡದಿದ್ದಲ್ಲಿ, ಅಂಥ ತೆರಿಗೆಯ ಅಥವಾ ಇತರ ಮೊಬಲಗಿನ ವಸೂಲಿಯ ವ್ಯವಹರಣೆಗಳನ್ನು ತಡೆಯುವ ಆದೇಶವನ್ನು ವಿವಾದಿತ ತೆರಿಗೆಯ ಅರ್ಧದಷ್ಟು ಸಂದಾಯ ಮಾಡುವ ಮತ್ತು ಅಂಥ ತೆರಿಗೆಯ ಇನ್ನುಳಿದ ಅರ್ಧದಷ್ಟನ್ನು ಅಥವಾ ಇತರ ಮೊಬಲಗನ್ನು ಮುಂದಿನ ಹದಿನೈದು ದಿನಗಳ ಅವಧಿಯೊಳಗೆ ಸಲ್ಲಿಸುವ ಬಗ್ಗೆ ತೆರಿಗೆ ನಿರ್ಧರಣಾ ಪ್ರಾಧಿಕಾರಕ್ಕೆ ತೃಪ್ತಿಕರವಾಗುವಂತೆ ಸಾಕಷ್ಟು ಭದ್ರತೆ ನೀಡುವ ಷರತ್ತಿಗೆ ಒಳಪಟ್ಟು ಅಪೀಲು ಪ್ರಾಧಿಕಾರವು ತಡೆಯಾಜ್ಞೆ ನೀಡಿದೆಯೆಂದು ಭಾವಿಸತಕ್ಕದ್ದು.

(ಡಿ) ಮೇಲಿನ (1)ನೇ ಉಪ ಪ್ರಕರಣದ ಅಡಿಯಲ್ಲಿಯ ಅಪೀಲಿನ ಸಂಬಂಧದಲ್ಲಿಯ ಯಾವುದೇ ವ್ಯವಹರಣೆಯಲ್ಲಿಯ ಯಾವುದೇ ತೆರಿಗೆ ಅಥವಾ ಇತರ ಮೊಬಲಗಿನ ವಸೂಲಾತಿಯ ವ್ಯವಹರಣೆಯನ್ನು ತಡೆಯುವ ಆಜ್ಞೆಯನ್ನು ಹೊರಡಿಸಲಾಗಿದ್ದರೆ ಅಪೀಲು ಪ್ರಾಧಿಕಾರವು ಅಂಥ ಆದೇಶದ ದಿನಾಂಕದಿಂದ ಎರಡುನೂರಾ ನಲವತ್ತು ದಿನಗಳ ಅವಧಿಯ ಒಳಗೆ ಅಪೀಲನ್ನು ವಿಲೆ ಮಾಡತಕ್ಕದ್ದು.

(ಇ) ಅಂಥ ಅಪೀಲನ್ನು (ಡಿ) ಖಂಡದಲ್ಲಿ ನಿರ್ದಿಷ್ಟಪಡಿಸಿದ ಅವಧಿಯ ಒಳಗೆ ಹಾಗೆ ವಿಲೆ ಮಾಡದಿದ್ದಲ್ಲಿ, ಸದರಿ ಅವಧಿಯ ಮುಕ್ತಾಯದ ತರುವಾಯ ತಡೆಯಾಜ್ಞೆಯು ತೆರವಾಗತಕ್ಕದ್ದು ಮತ್ತು ಅಪೀಲು ಪ್ರಾಧಿಕಾರವು ಸದರಿ ತೆರಿಗೆ ಅಥವಾ ಇತರ ಮೊಬಲಗಿನ ವಸೂಲಿಯ ವ್ಯವಹರಣೆಗಳನ್ನು ತಡೆಯುವ ಯಾವುದೇ ಮುಂದಿನ ಆದೇಶವನ್ನು ಮಾಡತಕ್ಕದ್ದಲ್ಲ.

**XX XX XX**

**69. ತಪ್ಪುಗಳ ಸರಿಪಡಿಸುವಿಕೆ.–** (1) ದಾಖಲೆಯಿಂದ ಕಂಡುಬರುವ ಯಾವುದೇ ತಪ್ಪನ್ನು ಸರಿಪಡಿಸುವ ದೃಷ್ಟಿಯಿಂದ ನಿಯಮಿಸಲಾದ ಪ್ರಾಧಿಕಾರವು, ಅಪೀಲು ಪ್ರಾಧಿಕಾರವು ಅಥವಾ ಪುನರೀಕ್ಷಣಾ ಪ್ರಾಧಿಕಾರವು, ತಾನು ಮಾಡಿದ ಆದೇಶದ ದಿನಾಂಕದಿಂದ ಐದು ವರ್ಷಗಳೊಳಗೆ ಯಾವುದೇ ಕಾಲದಲ್ಲಿ ಅಂಥ ತಿದ್ದುಪಡಿ ಮಾಡಬಹುದು.

(2) ತೆರಿಗೆ ನಿರ್ಧರಣೆಯನ್ನು ಹೆಚ್ಚಿಸುವ ಅಥವಾ ಅನ್ಯಥಾ ಸಂಬಂಧಪಟ್ಟ ವ್ಯಕ್ತಿಯ ಬದ್ಧತೆಯನ್ನು ಹೆಚ್ಚಿಸುವ ಪರಿಣಾಮ ಉಳ್ಳಂಥ ತಿದ್ದುಪಡಿಯನ್ನು ನಿಯಮಿಸಲಾದ ಪ್ರಾಧಿಕಾರ, ಅಪೀಲು ಪ್ರಾಧಿಕಾರ ಅಥವಾ ಸಂದರ್ಭಾನುಸಾರವಾಗಿ ಪುನರೀಕ್ಷಣಾ ಪ್ರಾಧಿಕಾರವು, ಹಾಗೆ ಮಾಡುವ ತನ್ನ ಉದ್ದೇಶದ ಬಗ್ಗೆ ನೋಟೀಸನ್ನು ಸಂಬಂಧಪಟ್ಟ ವ್ಯಕ್ತಿಗೆ ಕೊಟ್ಟಿದ್ದ ಹೊರತು ಮತ್ತು ಸಂಬಂಧಪಟ್ಟ ವ್ಯಕ್ತಿಗೆ ಅಂಥ ತಿದ್ದುಪಡಿಯ ವಿರುದ್ಧ ಲಿಖಿತದಲ್ಲಿ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟಿದ್ದ ಹೊರತು ಮಾಡತಕ್ಕದ್ದಲ್ಲ.

(2–ಎ) ತೆರಿಗೆದಾರನು ದಾಖಲೆಯಲ್ಲಿ ಕಂಡುಬಂದಂತೆ ಆದೇಶದಲ್ಲಿಯ ಯಾವುದೇ ತಪ್ಪನ್ನು ಸರಿಪಡಿಸಲು ಅರ್ಜಿಯನ್ನು ಸಲ್ಲಿಸಿದಲ್ಲಿ ಮತ್ತು ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ಅರವತ್ತು ದಿನಗಳೊಳಗೆ ತೆರಿಗೆ ನಿರ್ಧರಣಾ ಪ್ರಾಧಿಕಾರವು ಅಂಥ ಅರ್ಜಿಯನ್ನು ತಿರಸ್ಕರಿಸಿರದಿದ್ದಲ್ಲಿ, ಅಂಥ ತಪ್ಪನ್ನು ಸರಿಪಡಿಸಿ ಆದೇಶವನ್ನು ತಿದ್ದಲಾಗಿದೆಯೆಂದು ಭಾವಿಸತಕ್ಕದ್ದು.

**XX XX XX**

**72. ವಿವರ ಪಟ್ಟಿಗಳಿಗೆ ಮತ್ತು ತೆರಿಗೆ ನಿರ್ಧರಣಕ್ಕೆ ಸಂಬಂಧಿಸಿದ ದಂಡಗಳು.–** (1) ಅಧಿನಿಯಮದ ಅಡಿಯಲ್ಲಿ ಅಗತ್ಯಪಡಿಸಿದಂತೆ ಒಂದು ವಿವರಪಟ್ಟಿ ಸಲ್ಲಿಸಲು ತಪ್ಪಿದ ಅಥವಾ ಸಲ್ಲಿಸಿದ ಯಾವುದೇ ವಿವರ ಪಟ್ಟಿಯಂತೆ ಬಾಕಿ ಇರುವ ತೆರಿಗೆಯನ್ನು ಸಂದಾಯಮಾಡಲು ವಿಫಲನಾದ ಒಬ್ಬ ವ್ಯಾಪಾರಿಯು ಬಾಕಿ ಇರುವ ಯಾವುದೇ ತೆರಿಗೆ ಅಥವಾ ಬಡ್ಡಿಯ ಜೊತೆಗೆ,–

(ಎ) ಸಂದಾಯಮಾಡಲು ತಪ್ಪಿದ ಪ್ರತಿಯೊಂದು ದಿನಕ್ಕಾಗಿ ಐವತ್ತು ರೂಪಾಯಿಗಳ ದಂಡವನ್ನು ಮತ್ತು ಹಾಗೆ ಸಂದಾಯಮಾಡಲು ತಪ್ಪಿರುವುದು ಐದು ದಿನಗಳಿಗಿಂತ ಹೆಚ್ಚಾಗಿರುವಲ್ಲಿ,

(i) ತೆರಿಗೆ ಬಾಕಿಯು ಇನ್ನೂರ್ರೈವತ್ತು ರೂಪಾಯಿಗಳಿಗಿಂತ ಕಡಿಮೆ ಇದ್ದರೆ, ಅಂಥ ದಂಡವು ಇನ್ನೂರಐವತ್ತು ರೂಪಾಯಿಗಳನ್ನು ಮೀರತಕ್ಕದ್ದಲ್ಲ;

(ii) ತೆರಿಗೆ ಬಾಕಿಯು ಇನ್ನೂರಐವತ್ತು ರೂಪಾಯಿಗಳಿಗಿಂತ ಹೆಚ್ಚಾಗಿದ್ದರೆ, ಅಂಥ ದಂಡವನ್ನು ಪ್ರತಿ ದಿನಕ್ಕೆ ಐವತ್ತು ರೂಪಾಯಿಗಳಂತೆ, ಬಾಕಿ ಇರುವ ತೆರಿಗೆಯ ಮೊಬಲಗನ್ನು ಮೀರದಂತೆ ಲೆಕ್ಕಹಾಕತಕ್ಕದ್ದು; ಮತ್ತು

(ಬಿ) (i) ಸಂದಾಯಮಾಡಲು ತಪ್ಪಿರುವುದು, ಹತ್ತು ದಿನಗಳಿಗಿಂತ ಹೆಚ್ಚಾಗಿಲ್ಲದಿದ್ದರೆ ಬಾಕಿ ಇರುವ ತೆರಿಗೆ ಮೊಬಲಗಿನ ಶೇಕಡಾ ಐದರಷ್ಟು ಅಥವಾ ಐವತ್ತು ರೂಪಾಯಿಗಳು ಇವುಗಳಲ್ಲಿ ಯಾವುದು ಹೆಚ್ಚೋ ಅಷ್ಟಕ್ಕೆ ಸಮನಾದ ಹೆಚ್ಚಿನ ದಂಡವನ್ನು ;

(ii) ಸಂದಾಯ ಮಾಡಲು ತಪ್ಪಿರುವುದು ಹತ್ತು ದಿನಗಳಿಗಿಂತ ಹೆಚ್ಚಾಗಿದ್ದರೆ, ಬಾಕಿ ಇರುವ ತೆರಿಗೆಯ ಶೇಕಡಾ ಹತ್ತಕ್ಕೆ, ಸಮನಾದ ಹೆಚ್ಚಿನ ದಂಡವನ್ನು,

– ಸಂದಾಯಮಾಡಲು ಹೊಣೆಗಾರನಾಗತಕ್ಕದ್ದು.

(6) ಮೇಲ್ಕಂಡ ದಂಡಗಳನ್ನು ವಿಧಿಸುವ ಅಧಿಕಾರವು, ವಿವರ ಪಟ್ಟಿಗಳನ್ನು ಸ್ವೀಕರಿಸಲು ಅಗತ್ಯಪಡಿಸಲಾದ ನಿಯಮಿಸಲಾದ ಪ್ರಾಧಿಕಾರದಲ್ಲಿ ಅಥವಾ ತೆರಿಗೆ ನಿರ್ಧರಣೆ ಅಥವಾ ತೆರಿಗೆ ಪುನರ್ ನಿರ್ಧರಣೆ ಮಾಡಲು ನಿಯಮಿಸಲಾದ ಪ್ರಾಧಿಕಾರದಲ್ಲಿ ನಿಹಿತವಾಗಿರತಕ್ಕದ್ದು.

**XX XX XX**

**74. ದಾಖಲೆಗಳನ್ನು ಇಡುವುದಕ್ಕೆ ಮತ್ತು ಪರಿಶೋಧಿತ ಲೆಕ್ಕಪತ್ರಗಳ ವಿವರ ಪತ್ರವನ್ನು ಸಲ್ಲಿಸುವುದಕ್ಕೆ ಸಂಬಂಧಿಸಿದ ದಂಡಗಳು.–** (1) ಯಾವೊಬ್ಬ ವ್ಯಾಪಾರಿಯು, 31ನೇ ಪ್ರಕರಣಕ್ಕೆ ಅನುಸಾರವಾಗಿ ಅಥವಾ ನಿಯಮಿಸಲಾದ ಪ್ರಾಧಿಕಾರದ ಆದೇಶದ ಮೂಲಕ, ಸೂಕ್ತ ದಾಖಲೆಗಳನ್ನು ಇಡಲು ಮತ್ತು ನಿರ್ವಹಿಸಲು ಅಥವಾ ಸಿವಿಲ್ ಕಾಮಗಾರಿ ಕರಾರನ್ನು ಕೈಗೊಳ್ಳಲು ಮಾಡಿಕೊಂಡ ಒಪ್ಪಂದದ ಪ್ರತಿಯನ್ನು ಸಲ್ಲಿಸಲು ತಪ್ಪಿದಲ್ಲಿ ಅವನು ಯಾವುದೇ ಒಂದು ವರ್ಷದ ಅವಧಿಯಲ್ಲಿ ಹಾಗೆ ತಪ್ಪಿರುವುದು ಮೊದಲ ಬಾರಿಯಾಗಿದ್ದರೆ ಎರಡು ಸಾವಿರ ರೂಪಾಯಿಗಳಿಗೆ ಅಥವಾ ಆ ವರ್ಷದಲ್ಲಿ ಎರಡನೇ ಬಾರಿಗೆ ಅಥವಾ ಅದರ ನಂತರ ಮೌಲ್ಯವರ್ಧಿತ ತೆರಿಗೆ 734 ತಪ್ಪಿದ್ದರೆ ಐದು ಸಾವಿರ ರೂಪಾಯಿಗಳಿಗೆ ದಂಡಕ್ಕೆ ಮತ್ತು ಅಂಥ ದಂಡ ವಿಧಿಸಿದ್ದರ ವಿರುದ್ಧ ಕಾರಣಗಳನ್ನು ತೋರಿಸಲು ಅವಕಾಶವನ್ನು ನೀಡಿದ ತರುವಾಯ, ದಂಡ ನೀಡಲು ತಪ್ಪುವುದು ಮುಂದುವರಿಯುತ್ತಿರುವವರೆಗೆ ಪ್ರತಿದಿನಕ್ಕೆ ಎರಡು ನೂರು ರೂಪಾಯಿಗಳಿಗೆ ಮೀರದ ಹೆಚ್ಚಿನ ದಂಡವನ್ನು ಸಹ ನೀಡಲು ಬದ್ಧನಾಗಿರತಕ್ಕದ್ದು.

**XX XX XX**

**75. ದಾಖಲೆಗಳನ್ನು ಹಾಜರುಪಡಿಸುವುದಕ್ಕೆ ಮತ್ತು ಮಾಹಿತಿಯನ್ನು ಒದಗಿಸುವುದಕ್ಕೆ ಸಂಬಂಧಿಸಿದ ದಂಡಗಳು.–** ಯಾವೊಬ್ಬ ವ್ಯಾಪಾರಿ ಅಥವಾ ವ್ಯಕ್ತಿಯು, ನಿಯಮಿಸಲಾದ ಪ್ರಾಧಿಕಾರಿಯು ಕೋರಿದಾಗ ಈ ಅಧಿನಿಯಮದ ಅಗತ್ಯತೆಗಳಿಗೆ ಅನುಸಾರವಾಗಿ ಯಾವುವೇ ದಾಖಲೆಗಳನ್ನು ಹಾಜರುಪಡಿಸಲು ಅಥವಾ ಯಾವುದೇ ಮಾಹಿತಿಯನ್ನು ಒದಗಿಸಲು ತಪ್ಪಿದಲ್ಲಿ, ದಂಡನೆಯನ್ನು ವಿಧಿಸುವುದರ ವಿರುದ್ಧ ಲಿಖಿತದಲ್ಲಿ ಕಾರಣಗಳನ್ನು ತೋರಿಸಲು ಅವಕಾಶವನ್ನು ನೀಡಿದ ತರುವಾಯ, ಐದು ಸಾವಿರ ರೂಪಾಯಿಗಳಿಗೆ ಮೀರದ ದಂಡಕ್ಕೆ ಮತ್ತು ಹಾಗೆ ದಂಡವನ್ನು ನೀಡಲು ತಪ್ಪುವುದು ಮುಂದುವರಿಯುತ್ತಿರುವವರೆಗೆ ಒಂದು ದಿನಕ್ಕೆ ಎರಡು ನೂರು ರೂಪಾಯಿಗಳ ಹೆಚ್ಚಿನ ದಂಡವನ್ನು ಸಹ ನೀಡಲು ಬದ್ಧನಾಗಿರತಕ್ಕದ್ದು.

**XX XX XX**

**80. ಅಪರಾಧಗಳ ಸಂಜ್ಞೇಯತೆ.–** (1) ಯಾವುದೇ ನ್ಯಾಯಾಲಯವು, ಜಂಟಿ ಆಯುಕ್ತರ ಪೂರ್ವ ಮಂಜೂರಾತಿ ಪಡೆಯದೇ, 79ನೇ ಪ್ರಕರಣದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧದ ಸಂಜ್ಞೇಯತೆಯನ್ನು ತೆಗೆದುಕೊಳ್ಳತಕ್ಕದ್ದಲ್ಲ. ಮತ್ತು ಪ್ರಥಮ ದರ್ಜೆ ಮ್ಯಾಜಿಸ್ಟ್ರೇಟನಿಗಿಂತ ಕಡಿಮೆಯಲ್ಲದ ದರ್ಜೆಯ ಯಾವುದೇ ನ್ಯಾಯಾಲಯವು ಅಂಥ ಯಾವುದೇ ಅಪರಾಧದ ಅಧಿವಿಚಾರಣೆಯನ್ನು ನಡೆಸತಕ್ಕದ್ದಲ್ಲ.

(2) ದಂಡ ಪ್ರಕ್ರಿಯಾ ಸಂಹಿತೆ, 1973ರಲ್ಲಿ (1974ರ ಕೇಂದ್ರ ಅಧಿನಿಯಮ 2) ಏನೇ ಒಳಗೊಂಡಿದ್ದರೂ, 79ನೇ ಪ್ರಕರಣದ ಅಡಿಯಲ್ಲಿ ದಂಡನೀಯವಾದ ಎಲ್ಲಾ ಅಪರಾಧಗಳು ಸಂಜ್ಞೇಯ ಮತ್ತು ಜಾಮೀನೀಯವಾಗಿರತಕ್ಕದ್ದು.

**ಒಂದನೇ ಅನುಸೂಚಿ**

**(5ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ತೆರಿಗೆಯಿಂದ ವಿನಾಯಿತಿಗೊಳಿಸಿದ ಸರಕುಗಳು)**

| ಕ್ರಮ ಸಂಖ್ಯೆ | ಸರಕುಗಳ ವಿವರ |
|---|---|
| | |

4. ಘೋಷಿಸಿದ ಸರಕುಗಳನ್ನು ಒಳಗೊಂಡಂತೆ ಆದರೆ ಮೂರನೇ ಅನುಸೂಚಿಯಲ್ಲಿ ಅಥವಾ ಸರ್ಕಾರದಿಂದ ಅಧಿಸೂಚಿಸಿದ ಅನ್ಯವ ನಿರ್ದಿಷ್ಟಪಡಿಸಿದವುಗಳ ಹೊರತಾಗಿ, (ಭಾರತದಲ್ಲಿ ತಯಾರಿಸಲಾದ ಅಥವಾ ಉತ್ಪಾದಿಸಲಾದ) ಎಲ್ಲ ಬಗೆ ಜವಳಿಗಳು ಮತ್ತು ಬಟ್ಟೆಗಳು.

**XX XX XX**

47. ಅಬ್ಕಾರಿ ಹೆಚ್ಚುವರಿ ಸುಂಕ (ವಿಶೇಷ ಮಹತ್ವದ ಸರಕುಗಳು) ಅಧಿನಿಯಮ, 1957ರ (1957ರ ಕೇಂದ್ರ ಅಧಿನಿಯಮ 58) ಒಂದನೇ ಅನುಸೂಚಿಯ 2ನೇ ಅಂಕಣದಲ್ಲಿ ಕಾಲಕಾಲಕ್ಕೆ ವಿವರಿಸಲಾದಂತೆ (ಭಾರತದಲ್ಲಿ ಉತ್ಪಾದಿಸಲಾದ ಅಥವಾ ತಯಾರಿಸಲಾದ) ಸಕ್ಕರೆ.

**ಮೂರನೇ ಅನುಸೂಚಿ**

**XXX**

[4(1)(ಎ)(ii)ನೇ ಪ್ರಕರಣ]

| ಕ್ರಮ ಸಂಖ್ಯೆ | ಸರಕುಗಳ ವಿವರ |
|---|---|
| 1 | 2 |

1. ಕೈಯಿಂದ ನಡೆಸದಿರುವ ಅ

29. ಕಾಗದದ ಮತ್ತು ಪ್ಲಾಸ್ಟಿಕಿನ ಲೋಟಗಳು ಮತ್ತು ತಟ್ಟೆಗಳು

**ಆರನೇ ಅನುಸೂಚಿ**

| [ಪ್ರಕರಣ 4(1) (ಸಿ)] ಕ್ರಮ ಸಂಖ್ಯೆ | ಕಾಮಗಾರಿಗಳ ಕರಾರಿನ ವಿವರಣೆ | ತೆರಿಗೆಯ ದರ |
|---|---|---|
| 1 | 2 | 3 |
| 6 | ಪೌಡರ್ ಕೋಟಿಂಗನ್ನು ಒಳಗೊಂಡಂತೆ ಲ್ಯಾಮಿನೇಷನ್, ರಬ್ಬರೈಸೇಷನ್, ಕೋಟಿಂಗ್ ಮತ್ತು ಅಂಥವೇ ಸಂಸ್ಕರಣ<br>1. 2008ರ ಅಧಿನಿಯಮ ಸಂಖ್ಯೆ 5ರ ಮೂಲಕ ದಿನಾಂಕ: 1.8.2008 ರಿಂದ ಸೇರಿಸಲಾಗಿದೆ. | ಶೇಕಡಾ ಐದು |

## KARNATAKA LEGISLATIVE ASSEMBLY

### THIRTEENTH LEGISLATIVE ASSEMBLY

### THIRTEENTH SESSION

## THE KARNATAKA VALUE ADDED TAX (AMENDMENT) BILL, 2012

### (L.A. Bill No. 3 of 2012)

A Bill further to amend the Karnataka Value Added Tax Act, 2003.

Whereas it is expedient further to amend the Karnataka Value Added Tax Act, 2003 (Karnataka Act 32 of 2004) for the purposes hereinafter appearing;

Be it enacted by the Karnataka State Legislature in the Sixty third year of the Republic of India, as follows.-

**1. Short title and commencement.-** (1) This Act may be called the Karnataka Value Added Tax ( Amendment) Act, 2012.

(2) It shall come into force with effect from the First day of April, 2012.

**2. Amendment of section 4.-** In the Karnataka Value Added Tax Act, 2003 (Karnataka Act 32 of 2004) (hereinafter referred to as the principal Act), in section 4, in sub-section (1),

(i) in clause (b), in sub-clause (ii), for the words “fifteen per cent”, the words “seventeen per cent” shall be substituted;

(ii) at the end, the following proviso shall be and shall always be deemed to have been inserted, namely:-

"Provided that the rate of tax in respect of declared goods as specified in section 14 of the Central Sales Tax Act, 1956 (Central Act 74 of 1956) shall be four per cent from Eighth day of April, 2011 to Eleventh day of April, 2011."

**3. Amendment of section 11.-** In section 11 of the principal Act, for sub-section (c), the following shall be substituted, namely:-

"(c) Input tax shall not be deducted by any dealer executing a works contract,

(i) in respect of the amount paid or payable to any sub-contractor as the consideration for execution of part or whole of such works contract for him, that is claimed as deduction; and

(ii) in respect of the amount actually expended towards labour and other like charges not involving any transfer of property in goods in connection with the execution of works contract, that is claimed as deduction."

**4. Omission of section 18-A.-** Section 18-A of the principal Act shall be omitted.

**5. Omission of section 30.-** Section 30 of the principal Act shall be omitted.

**6. Amendment of section 35.-** In section 35 of the principal Act, for sub-section (4), the following shall be substituted, namely:-

"(4) If any dealer having furnished a return under this Act, other than a return furnished under sub-section (3) of Section 38, discovers any omission or incorrect statement therein, other than as a result of an inspection or receipt of any other information or evidence by the prescribed authority,

(a) he shall furnish a revised return within the time prescribed for filing the return for the succeeding tax period; and

(b) he shall furnish a revised return any time thereafter but within six months from the end of the relevant tax period, if so permitted by the prescribed authority."

**7. Amendment of section 40.-** In section 40 of the principal Act, for sub-sections (1) and (2), the following shall be substituted, namely:-

"(1) An assessment under section 38 or re-assessment under Section 39 of an amount of tax due for any prescribed tax period shall not be made after five years after the end of the prescribed tax period.

Provided that an assessment or reassessment relating to any tax period upto the period ending 31st day of March, 2007 shall be made within a period of eight years after the end of the prescribed tax period.

Provided further that an assessment or reassessment relating to any tax period commencing from the 1st day of April, 2007 upto the period ending 31st day of March, 2012 shall be made within a period of seven years after the end of the prescribed tax period.

(2) Notwithstanding anything contained in sub-section (1), if any tax is, not paid by a dealer who has failed to get registered though liable to do so or fraudulently evaded attracting punishment under Section 79, an assessment or reassessment may be made within eight years from the end of the prescribed tax period.

Provided that an assessment or reassessment relating to any tax period upto the period ending 31st day of March, 2007 shall be made under this sub-section within a period of ten years after the end of the prescribed tax period."

**8. Amendment of section 53.-** In section 53 of the principal Act, in sub-section (2), before the Explanation, the following proviso shall be inserted, namely:-

"Provided that the Commissioner may notify the website in which the particulars prescribed to be contained in the declaration specified under clause (d) shall be entered in respect of any specified class of goods or any specified class of dealers or as a result of any specified class of transactions as may be notified by him. Where the Commissioner has so notified the website, the owner or the person in charge of the goods vehicle or a boat or a ship or

similar vessel shall enter the above particulars in the notified website and shall produce proof of entering the particulars in such website, before the officer-in-charge of the checkpost or barrier or any other empowered officer.”

**9. Amendment of section 54.-** In section 54 of the principal Act,- (i) in sub-section (1),

(a) for the words “Where a vehicle carrying goods taxable under this Act”, the words “Where a vehicle carrying goods as may be notified by the Government or the Commissioner” shall be substituted; and

(b) for the proviso, the following shall be substituted, namely:-

“Provided that the Commissioner may notify the website in which the necessary information shall be furnished by the driver or any other person-in-charge of the vehicle after entry of such vehicle into the State or after its movement has commenced from the State, for issue of a transit pass. Where the Commissioner has so notified the website, the driver or any other person in charge of the vehicle after entry of the vehicle into the State or after movement has commenced from the State, shall enter the above information in the notified website for issue of a transit pass.”

(ii) in sub-section (2), the following proviso shall be inserted, namely:-

“Provided that the Commissioner may notify the website in which the driver or the person in charge of the vehicle shall enter the particulars of the transit pass obtained under sub-section (1), before his exit from the State on a route where no checkpost or barrier is situated. Where the Commissioner has so notified the website, the driver or the other person in charge of the vehicle shall enter the particulars of the transit pass obtained under sub-section (1) in the notified website before his exit from the State.”

**10. Amendment of section 62.**- In section 62 of the principal Act, in sub-section (4),

(i) in clause (a), for the words “payment of tax and penalty”, the words “payment of tax and other amount” shall be substituted.

(ii) in clause (c),

(a) for sub-clause(i), the following shall be substituted, namely:-

“(i) The appellate authority may, in its discretion, stay payment of one half of tax and other amount, if the appellant makes payment of the other half of the tax and other amount along with prescribed form of appeal.”

(b) in sub-clause (ii), for the words “subject to payment of one half of the tax disputed”, the words “subject to payment of one half of the tax and other amount disputed” shall be substituted.

(iii) clause (e) shall be omitted.

**11. Amendment of section 69.**- In section 69 of the principal Act, sub-section (2-A) shall be omitted.

**12. Amendment of section 72.**- In section 72 of the principal Act, after sub-section (6), the following shall be inserted, namely:-

“(7) Any dealer who fails to submit returns as required by the provisions of the Act continuously for three months or two quarters, as a case may be, shall on conviction, in addition to recovery of any tax or penalty or interest or other amount that may be due from him or levied on him, be punishable with simple imprisonment which may extend to six months or with a fine which shall not be less than five thousand rupees but which may extend to twenty five thousand rupees or with both and when the offence is a continuing one, with a daily fine not exceeding two hundred rupees during the period of continuance of the offence.”

**13. Amendment of section 74.**- In section 74 of the principal Act, in sub-section (1),

(i) for the words “two thousand rupees”, the words “five thousand rupees” shall be substituted;

(ii) for the words “five thousand rupees”, the words “ten thousand rupees” shall be substituted.

**14. Amendment of section 75.**- In section 75 of the principal Act, for the words "five thousand rupees", the words "ten thousand rupees" shall be substituted.

**15. Amendment of section 80.**- In section 80 of the principal Act, for the words and figures "under Section 79" in the two places they occur, the words "under section 72 or 79" shall be substituted.

**16. Amendment of First Schedule.**- In the First Schedule to the principal Act,

(i) for the entry relating to serial number 4, the following shall be substituted, namely:-

"4. All varieties of textiles and fabrics but excluding those specified elsewhere in Third Schedule or notified by the Government."

(ii) for the entries relating to serial number 47, the following shall be and shall be deemed to have been substituted from Eighth day of April, 2011, namely:-

"47. Sugar other than sugar candy, confectionery and the like."

**17. Amendment of Third Schedule.-** In the Third Schedule to the principal Act, after the entries relating to serial number 29, the following shall be inserted, namely:-

"30. HDPE and other plastic woven fabrics."

**18. Amendment of Sixth Schedule.-** In the Sixth Schedule to the principal Act, after the entries relating to serial number 6, the following shall be inserted, namely:-

| | |
|---|---|
| "7. Manufacture and supply of readymade garments, clothing accessories and other made up textile articles including dyeing, printing, stitching, embroidery work and the like. | Five per cent " |

## STATEMENT OF OBJECTS AND REASONS

It is considered necessary to amend the Karnataka Value Added Tax Act, 2003 to give effect to the proposals made in the Budget and matters connected therewith.

Certain consequential and incidental amendments and other amendments to rationalise certain current provisions are also made.

Hence the Bill.

## MEMORANDUM REGARDING DELEGATED LEGISLATION

| | |
|---|---|
| **CLAUSE 8-** | Proviso sought to be inserted in sub-section (2) of section 53 under clause (8) empowers the Commissioner of Commercial Taxes to notify the website in which the particulars prescribed in the declaration specified shall be entered by the driver or any other person-in-charge of a goods vehicle or a boat, ship or similar vessel. |
| **CLAUSE 9(i)(a)-** | Amendment sought to be made in sub-section (1) of section 54 under clause 9(i)(a) empowers the State Government and the Commissioner of Commercial Taxes to notify the goods in respect of which transit pass shall be obtained by the driver or any other person-in-charge of the goods vehicle. |
| **CLAUSE 9(i)(b)-** | Proviso sought to be inserted in sub-section (1) of section 54 under clause (9)(i)(b) empowers the Commissioner of Commercial Taxes to notify the website in which the necessary information shall be furnished for issue of a transit pass. |

**CLAUSE 9(i)(c)-** Proviso sought to be inserted in sub-section (2) of section 54 under clause (9)(i)(c) empowers the Commissioner of Commercial Taxes to notify the website in which the particulars of a transit pass obtained shall be entered before the exit of the goods from the State to which it is issued.

**CLAUSE 16(i) –** Entry serial number 4 sought to be substituted in the First Schedule under clause 16(i) empowers the State Government to notify the textiles and fabrics which would not be covered by the said entry.

The proposed delegation of Legislative power is normal in character.

## FINANCIAL MEMORANDUM

There is no extra expenditure involved by the proposed measure.

**D.V. SADANANDA GOWDA**
Chief Minister

**P. OMPRAKASHA**
Secretary
Karnataka Legislative Assembly

## ANNEXURE

## EXTRACT OF THE KARNATAKA VALUE ADDED TAX ACT, 2003

### (KARNATAKA ACT NO. 32 OF 2004)

**XXXXX**

**4. Liability to tax and rates thereof.-** (1) Every dealer who is or is required to be registered as specified in Sections 22 and 24, shall be liable to pay tax, on his taxable turnover,

(a) in respect of goods mentioned in,-

(i) Second Schedule, at the rate of one per cent,

(ii) Third Schedule, at the rate of five per cent, and

(iii) Fourth Schedule, at the rate of twenty per cent.

(b) in respect of.-

(i) declared goods as specified in Section 14 of the Central Sales Tax Act, 1956 (Central Act 74 of 1956) at the maximum rate specified for such goods under Section 15 of the said Act;

(ii) cigarettes, cigars, gutkha and other manufactured tobacco at the rate of fifteen per cent;

(iii) other goods at the rate of fourteen per cent.

(iv) other goods, at the rate of twelve and one half per cent.

(c) in respect of transfer of property in goods (whether as goods or in some other form) involved in the execution of works contract specified in column(2) of the Sixth Schedule, subject to Sections 14 and 15 of the Central Sales Tax Act, 1956 (Central Act 74 of 1956), at the rates specified in the corresponding entries in column (3) of the said Schedule.

**XXXXX**

**11. Input tax restrictions.-** (a) Input tax shall not be deducted in calculating the net tax payable, in respect of:

(1) tax paid on purchases attributable to sale of exempted goods exempted under Section 5, except when such goods are sold in the course of export out of the territory of India;

XXXXX

(b) Input tax shall not be deducted by an agent purchasing or selling goods on behalf of any other person other than a non-resident principal.

(c) Input tax shall not be deducted by any dealer executing a works contract in respect of the amount claimed as deduction paid or payable to any sub-contractor as the consideration for execution of part or whole of such works contract for him.

XXXXX

**18-A. Deduction of tax at source in the case of certain goods.-**(1) Notwithstanding anything contained in this Act, every registered dealer purchasing oil seeds or non-refined oil or oil cake or scrap of iron and steel or any other goods as may be notified by the Commissioner, for use in manufacture or processing or any other purpose as may be notified by the Commissioner, shall deduct out of the amounts payable by him to the registered dealer selling such goods to him, an amount equivalent to the tax payable on the sale of such goods under section 4.

(2) No such deduction shall be made under sub-section (1), if the amounts payable by them are in respect of sales of any goods, in the course of inter-State trade or commerce or, in the course of export out of the territory of India or, import into the territory of India or, outside the State.

(3) The deduction under sub-section (1) shall be made by the dealer on the basis of tax invoice issued by the selling dealer.

(4) The dealer making deduction under sub-section (1), shall send every month to the prescribed authority a statement in the prescribed form containing particulars of tax deducted during the preceding month and pay the amount of tax so deducted by him, within twenty days after the close of the preceding month in which such deductions were made and the amount so payable shall for the purposes of Section 42 be deemed to be an amount due under this Act.

(5) Where default is made in complying with the provisions of sub-section(4), the prescribed authority may, after such enquiry as it deems fit and after giving opportunity to the concerned dealer of being heard, determine to the best of its judgment, the amount payable under this sub-section by such dealer and the amount so determined shall be deemed to be an amount due under the Act for the purposes of Section 42.

(6) If default is committed in the payment of tax deducted beyond the period specified under sub-section (4), the dealer making deductions under sub-section (1) shall pay, by way of interest, a sum equal to the interest specified under sub-section (1) of Section 37 during the period in which such default is continued.

(7) The dealer making deduction under sub-section (1) shall furnish to the dealer from whom such deduction is made, a certificate obtained from the prescribed authority containing such particulars as may be prescribed.

(8) Payment by way of deduction in accordance with sub-section (4), shall be without prejudice to any other mode of recovery of tax due under this Act from the selling dealer.

(9) Where tax in respect of his sales of goods specified in sub-section (1) is remitted under sub-section (4), the tax payable by such selling dealer for any period, in respect of such sales shall be reduced by the amount of tax already remitted under the said sub-section.

(10) The burden of proving that the tax on such sales has already been remitted and of establishing the exact quantum of tax so remitted shall be on the dealer claiming the reduction.

XXXXX

**30. Credit and Debit Notes.-** (1) Where a tax invoice has been issued for any sale of goods and within six months from the date such sale the amount shown as tax charged in that tax invoice is found to exceed the tax payable in respect of the sale effected or is not payable on account of goods sold being returned within the prescribed period, the registered dealer effecting the sale shall issue forthwith to the purchaser a credit note containing particulars as prescribed:

(2) Where a tax invoice has been issued for sale of any goods and the tax payable in respect of the sale exceeds the amount shown as tax charged in such tax invoice, the registered dealer making the sale, shall issue to the purchaser a debit note containing particulars as prescribed.

(3) Any registered dealer who receives or issues, credit notes or debit notes shall declare them in his return to be furnished for the tax period in which the credit note is received or debit note is issued and claim reduction in tax or pay tax due thereon.

(4) Any document issued by the registered dealer as required under any other law containing particulars of credit note or debit note as prescribed shall be deemed to be a credit or debit note for the purpose of this section.

XXXXX

**35.Returns.-** (1) Subject to sub-sections (2) to (4), every registered dealer, and the Central Government, a State Government, a statutory body and a local authority liable to pay tax collected under sub-section (2) of Section 9, shall furnish a return in such form and manner, including electronic methods, and shall pay the tax due on such return within twenty days or fifteen days after the end of the preceding month or any other tax period as may be prescribed.

Provided that the specified class of dealers as may be notified by the Commissioner shall furnish particulars for preparation of the return in the prescribed form or submit the return in the prescribed form, electronically through internet in the manner specified in the said notification:

Provided further that the specified class of dealers as may be notified by the Commissioner shall pay tax payable on the basis of the return, by electronic remittance through internet in the manner specified in the said notification.

(2) The tax on any sale or purchase of goods declared in a return furnished shall become payable at the expiry of the period specified in sub-section (1) without requiring issue of a notice for payment of such tax.

(3) Subject to such terms and conditions as may be specified, the prescribed authority may require any registered dealer.-

(a) to furnish a return for such periods, or

(b) to furnish separate branch returns where the registered dealer has more than one place of business.

(4) If any dealer having furnished a return under this Act, other than a return furnished under sub-section (3) of Section 38, discovers any omission or incorrect statement therein, other than as a result of an inspection or receipt of any other information or evidence by the prescribed authority, he shall furnish a revised return within six months from the end of the relevant tax period except when such revised return is on issue of a debit note under Section 30 subject to sub-section (2) of Section 72.

XXXXX

**40. Period of limitation for assessment.-** (1) An assessment under Section 38 or re-assessment under Section 39 of an amount of tax due for any prescribed tax period shall not be made after the following time limits.-

(a) four years after the end of the prescribed tax period; or

(b) three years after evidence of facts, sufficient in the opinion of the prescribed authority to justify making of the re-assessment, comes to its knowledge,

whichever is later:

Provided that an assessment or re-assessment relating to any tax period ending 31st day of March, 2007 shall be made within a period of five years after the end of the prescribed tax period.

(2) If any tax is, not paid by a dealer who has failed to get registered though liable to do so or fraudulently evaded attracting punishment under-Section 79, an assessment or re-assessment may be made as if in sub-section (1) reference to four years was a reference to eight years.

XXXXX

**53. Establishment of check posts and inspection of goods in movement.-** (1) If the Government or the Commissioner considers it necessary, with a view to prevent or check evasion of tax under this Act in any place or places in the State, it or he may, by notification, direct the establishment of a check post or the erection of a barrier, or both, at such place or places as may be notified.

(2) The owner or person in charge of a goods vehicle or a boat, ship or similar vessel shall:

(a) carry with him a goods vehicle record, a trip sheet or a log book, as the case may be; and

(7) five distinguished persons from the educational, scientific and administrative fields to be nominated by the Pro-Chancellor ;

Provided that from amongst the nominated persons under this clause, one shall be a person belonging to Scheduled Castes and Scheduled Tribes and two shall be women ;

**XX** **XX** **XX**

**P. OMPRAKASHA**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಮಾರ್ಚ್ ೩೦, ೨೦೧೨ (ಚೈತ್ರ ೧೦, ಶಕ ವರ್ಷ ೧೯೩೪) | ನಂ. ೨೩೭ |
|---|---|---|

## KARNATAKA LEGISLATIVE ASSEMBLY SECRETARIAT

**NOTIFICATION**

**No. KLA/LGA/14/Bill/2012, Bangalore, Dated: 30.3.2012**

The following Bill was introduced in Legislative Assembly on 30.3.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿಮೂರನೇ ಅಧಿವೇಶನ**

## ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ವಿಧೇಯಕ, 2012

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 14)**

ಕರ್ನಾಟಕ ಪೌರ ನಿಗಮಗಳ (ತಿದ್ದುಪಡಿ) ಅಧಿನಿಯಮ, 1994ನ್ನು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ಅಧಿನಿಯಮ, 1994ನ್ನು (1994ರ ಕರ್ನಾಟಕ ಅಧಿನಿಯಮ 35) ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ಮೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 45ನೇ ಪ್ರಕರಣವನ್ನು ಬಿಟ್ಟುಬಿಡುವುದು.–** ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ಅಧಿನಿಯಮ, 1994ರ (1994ರ ಕರ್ನಾಟಕ ಅಧಿನಿಯಮ 35) 45ನೇ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

### ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಭಾರತ ಸಂವಿಧಾನದ 243ಜೆಡ್ ಇ ಅನುಚ್ಛೇದದ ಅಡಿಯಲ್ಲಿ ಮಹಾನಗರ ಯೋಜನಾ ಸಮಿತಿಯನ್ನು ರಚಿಸುವುದು ಅವಶ್ಯಕವಾಗಿದೆ. ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ಅಧಿನಿಯಮ, 1994ರಲ್ಲಿ (1994ರ ಕರ್ನಾಟಕ ಅಧಿನಿಯಮ 35) ಸದರಿ ಸಮಿತಿಯು ರಚನೆಯಾಗಿದ್ದು, ಮಹಾನಗರ ಯೋಜನಾ ಸಮಿತಿಯ ರಚನೆಯ ಪರಿಣಾಮವಾಗಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 1985ರ (1985ರ ಕರ್ನಾಟಕ ಅಧಿನಿಯಮ 39) ನಿರಸನಕ್ಕಾಗಿ ಸದರಿ ತಿದ್ದುಪಡಿ ಅಧಿನಿಯಮದ 45ನೇ ಪ್ರಕರಣವು ಅವಕಾಶವನ್ನು ಕಲ್ಪಿಸುತ್ತದೆ.

ಆದ್ದರಿಂದ, ಮಹಾನಗರ ಯೋಜನಾ ಸಮಿತಿಯ ರಚನೆಯ ತರವಾಯವೂ ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 1985ನ್ನು ಉಳಿಸಿಕೊಳ್ಳುವುದಕ್ಕಾಗಿ ಕರ್ನಾಟಕ ಪೌರ ನಿಗಮಗಳ (ತಿದ್ದುಪಡಿ) ಅಧಿನಿಯಮ, 1994ರ 45ನೇ ಪ್ರಕರಣವನ್ನು ಬಿಟ್ಟುಬಿಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಎಸ್. ಸುರೇಶ್ ಕುಮಾರ್**
ನಗರಾಭಿವೃದ್ಧಿ, ಕಾನೂನು ಮತ್ತು ಸಂಸದೀಯ
ವ್ಯವಹಾರಗಳ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಪೌರ ನಿಗಮಗಳ (ತಿದ್ದುಪಡಿ) ಅಧಿನಿಯಮ, 1994ರ (1994ರ ಕರ್ನಾಟಕ ಅಧಿನಿಯಮ 35) ಉದ್ಧೃತ ಭಾಗ**

XX XX XX

**45. ಮಹಾನಗರ ಯೋಜನಾ ಸಮಿತಿಯ ರಚನೆಯ ಪರಿಣಾಮಗಳು.–** (1) 503ಬಿ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಬೆಂಗಳೂರು ಮಹಾನಗರ ಯೋಜನಾ ಸಮಿತಿಯು ರಚನೆಯಾದ ಮೇಲೆ 1985ರ ಬೆಂಗಳೂರು ಮಹಾನಗರ ಪ್ರಾದೇಶಿಕ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮವು (1985ರ ಕರ್ನಾಟಕ ಅಧಿನಿಯಮ 39)ನಿರಸಿತಗೊಳ್ಳತಕ್ಕದ್ದು;

(2) ಹಾಗೆ ನಿರಸನವಾದ ಮೇಲೆ, ನಿರಸಿತ ಅಧಿನಿಯಮದ ಮೇರೆಗೆ ರಚಿತವಾದ ಬೆಂಗಳೂರು ಮಹಾನಗರ ಪ್ರಾದೇಶಿಕ ಅಭಿವೃದ್ಧಿ ಪ್ರಾಧಿಕಾರವು ವಿಘಟಿತಗೊಳ್ಳತಕ್ಕದ್ದು.

(3) (2)ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು, (1)ನೇ ಉಪಪ್ರಕರಣದಲ್ಲಿರುವುದಾವುದೂ,–

(ಎ) ಸದರಿ ಅಧಿನಿಯಮಿತಿಗಳ ಪೂರ್ವಪ್ರವರ್ತನೆಯನ್ನು ಅಥವಾ ಅವುಗಳ ಮೇರೆಗೆ ಮಾಡಿದ ಅಥವಾ ಮಾಡಲು ಎಡೆಗೊಟ್ಟ ಯಾವುದೇ ಕಾರ್ಯವನ್ನೂ ಬಾಧಿಸತಕ್ಕದ್ದಲ್ಲ; ಅಥವಾ

(ಬಿ) ಸದರಿ ಅಧಿನಿಯಮಿತಿಗಳ ಮೇರೆಗೆ ಪ್ರಾಪ್ತವಾದ ಅಥವಾ ವಹಿಸಿದ ಯಾವುದೇ ಹಕ್ಕು, ವಿಶೇಷಾಧಿಕಾರ, ಭಾದ್ಯತೆ ಅಥವಾ ಹೊಣೆಗಾರಿಕೆಯನ್ನು ಭಾಧಿಸತಕ್ಕದ್ದಲ್ಲ; ಅಥವಾ

(ಸಿ) ಸದರಿ ಅಧಿನಿಯಮಿತಿಗಳ ವಿರುದ್ಧವಾಗಿ ಮಾಡಿದ ಯಾವುದೇ ಅಪರಾಧಕ್ಕೆ ಸಂಬಂಧಿಸಿದಂತೆ ಯಾವುದೇ ದಂಡ, ಮುಟ್ಟುಗೋಲು ಅಥವಾ ದಂಡನೆಯನ್ನು ಭಾಧಿಸತಕ್ಕದ್ದಲ್ಲ; ಅಥವಾ

(ಡಿ) ಹಿಂದೆ ಹೇಳಿದಂತಹ ಯಾವುದೇ ಅಂಥ ಹಕ್ಕು, ವಿಶೇಷಾಧಿಕಾರ, ಭಾದ್ಯತೆ, ಹೊಣೆಗಾರಿಕೆ, ಮುಟ್ಟುಗೋಲು ಅಥವಾ ದಂಡನೆಗೆ ಸಂಬಂಧಿಸಿದಂತೆ ಯಾವುದೇ ತನಿಖೆ, ಕಾನೂನು ವ್ಯವಹರಣೆ ಅಥವಾ ಪರಿಹಾರೋಪಾಯವನ್ನು ಭಾಧಿಸತಕ್ಕದ್ದಲ್ಲ,

ಮತ್ತು ಸದರಿ ಅಧಿನಿಯಮಿತಿಯನ್ನು ನಿರಸಿತಗೊಳಿಸದಿದ್ದರೆ ಹೇಗೋ ಹಾಗೆ ಅಂಥ ತನಿಖೆ, ಕಾನೂನು ವ್ಯವಹರಣೆ ಅಥವಾ ಪರಿಹಾರೋಪಾಯವನ್ನು ಹೂಡಬಹುದು, ಮುಂದುವರಿಸಬಹುದು ಅಥವಾ ಜಾರಿಗೊಳಿಸಬಹುದು ಅಥವಾ ಅಂಥ ಯಾವುದೇ ದಂಡ, ಮುಟ್ಟುಗೋಲು ಅಥವಾ ದಂಡನೆಯನ್ನು ವಿಧಿಸಬಹುದು.

(4) ಸರ್ಕಾರವು ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ನೌಕರರ ವರ್ಗಗಳ ಹೊರತು ಬೆಂಗಳೂರು ಮಹಾನಗರ ಪ್ರಾದೇಶಿಕ ಅಭಿವೃದ್ಧಿ ಪ್ರಾಧಿಕಾರದ ಪ್ರತಿಯೊಬ್ಬ ಅಧಿಕಾರಿ ಮತ್ತು ನೌಕರನು ಬೆಂಗಳೂರು ಮಹಾನಗರ ಯೋಜನಾ ಸಮಿತಿಯ ಉದ್ಯೋಗಿಗಳಾಗತಕ್ಕದ್ದು ಮತ್ತು

ಇತರ ಉಪಬಂಧಗಳನ್ನು ಕಲ್ಪಿಸುವವರೆಗೆ ಬೆಂಗಳೂರು ಮಹಾನಗರ ಯೋಜನಾ ಸಮಿತಿಯ ರಚನೆಯಾಗುವುದಕ್ಕೆ ನಿಕಟಪೂರ್ವದಲ್ಲಿ ಅವರು ಹಕ್ಕುಳ್ಳವರಾಗಿದ್ದ ವೇತನ, ಭತ್ಯೆಗಳನ್ನು ಪಡೆಯತಕ್ಕದ್ದು ಮತ್ತು ಅಂಥ ಸೇವಾ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು.

(5) ಬೆಂಗಳೂರು ಮಹಾನಗರ ಯೋಜನಾ ಸಮಿತಿಯು ರಚನೆಯಾದ ದಿನಾಂಕದ ನಿಕಟಪೂರ್ವದಲ್ಲಿ ಬೆಂಗಳೂರು ಮಹಾನಗರ ಪ್ರಾದೇಶಿಕ ಅಭಿವೃದ್ಧಿ ಪ್ರಾಧಿಕಾರದ ಎಲ್ಲಾ ಆಸ್ತಿಗಳು ಮತ್ತು ಹೊಣೆಗಳು ಮತ್ತು ಆ ದಿನಾಂಕದಂದು ಅಸ್ತಿತ್ವದಲ್ಲಿದ್ದು, ಅದರಿಂದ ಅಥವಾ ಅದರ ಪರವಾಗಿ ಮಾಡಲಾದ ಎಲ್ಲಾ ಕರಾರುಗಳೂ ಬೆಂಗಳೂರು ಮಹಾನಗರ ಯೋಜನಾ ಸಮಿತಿಗೆ ವರ್ಗಾವಣೆಯಾಗತಕ್ಕದ್ದು.

XX XX XX

## KARNATAKA LEGISLATIVE ASSEMBLY

### THIRTEENTH LEGISLATIVE ASSEMBLY

### THIRTEENTH SESSION

## THE KARNATAKA MUNICIPAL CORPORATIONS (AMENDMENT) BILL, 2012

### (L.A. Bill No. 14 of 2012)

A Bill to amend the Karnataka Municipal Corporations (Amendment) Act, 1994.

Whereas it is expedient to amend the Karnataka Municipal Corporations (Amendment) Act, 1994 (Karnataka Act 35 of 1994), for the purposes hereinafter appearing;

Be it enacted by the Karnataka State Legislature in the sixty-third year of the Republic of India as follows, namely:-

**1. Short title and commencement.-** (1) This Act may be called the Karnataka Municipal Corporations (Amendment) Act, 2012.

(2) It shall come into force at once.

**2. Omission of section 45.-** In the Karnataka Municipal Corporations (Amendment) Act, 1994 (Karnataka Act 35 of 1994), section 45 shall be omitted.

### STATEMENT OF OBJECTS AND REASONS

It is necessary to constitute Metropolitan Planning Committee under Article 243ZE of the Constitution of India . The said Committee was constituted in the Karnataka Municipal Corporation (Amendment) Act, 1994 (Karnataka Act 35 of 1994) whereas section 45 of the said Amendment Act provides for repeal of the Bangalore Metropolitan Area Development Authority Act, 1985 (Karnataka Act 39 of 1985) consequent upon Constitution of Metropolitan Planning Committee.

Therefore, it is considered necessary to retain the Bangalore Metropolitan Area Development Authority Act, 1985 even after Constitution of the Metropolitan Planning Committee and also to omit section 45 of the Karnataka Municipal Corporation (Amendment) Act, 1994.

Hence the Bill,

### FINANCIAL MEMORANDUM

There is no extra Expenditure involved in the proposed Legislative Measure.

**S. SURESH KUMAR**
Minister for Urban Development,
Law and Parliamentary Affairs

**P. OMPRAKASHA**
Secretary
Karnataka Legislative Assembly

## ANNEXURE

**Extract from the Karnataka Municipal Corporations (Amendment) Act, 1994**
**Karnataka Act 35 of 1994)**

**xxx** **xxx** **xxx**

**45. Consequences of Constitution of Metropolitan Planning Committee:-** (1) On the Constitution of Bangalore Metropolitan Planning Committee under sub-section (1) of section 503B, the Bangalore Metropolitan Region Development Authority Act, 1985 (Karnataka Act 39 of 1985) shall stand repealed.

(2) On such repeal the Bangalore Metropolitan Region Development Authority constituted under the repealed Act shall stand desolved.

(3) Subject to the provisions of sub-section (2) nothing in sub-section (1) shall affect,

(a) the previous operation of the said enactment or anything done or sufferred thereunder; or

(b) any right, previlege, obligation or liability of accured or incurred in the said enactment; or

(c) any penalty, forfeiture or punishment incurred in respect of any offence committed against the said enactment; or

(d) any investigation legal proceeding or remedy in respect of such right, previlege, obligation, liability, forfeiture or punishment as aforesaid

and any such investigation, legal proceeding or remedy may be instituted, continued or enforced or any such penalty, forfeiture or punishment may be imposed as if the said enactment had not been repealed.

(4) Every officer and servant of the Bangalore Metropolitan Region Developmetn Authority other than such classes of servants as the government may by order specify shall become employees of the Bangalore Metropolitan Planning Committee and shall until other provisions are made receive the salary, allowances and be subject to the conditions of service which they were entitled immediately before the Constitution of the Bangalore Metropolitan Planning Committee.

(5) All assets and liabilites, of, and all contracts made by or on behalf of the Bangalore Metropolitan Region Development Authority immediately before the date of Constitution of the Bangalore Metropolitan Planning Committee and subsisting on that date shall stand transferred to the Bangalore Metropolitan Planning Committee.

**xxx** **xxx** **xxx**

**P. OMPRAKASHA**
Secretary
Karnataka Legislative Assembly

# ವಿಶೇಷ ಪತ್ರಿಕೆ


| ಭಾಗ – **IV-A** | ಬೆಂಗಳೂರು, ಶುಕ್ರವಾರ, ಮಾರ್ಚ್ ೩೦, ೨೦೧೨ (ಚೈತ್ರ ೧೦, ಶಕ ವರ್ಷ ೧೯೩೪) | ನಂ. ೨೪೦ |
|---|---|---|


## KARNATAKA LEGISLATIVE ASSEMBLY SECRETARIAT

### NOTIFICATION

**No. KLA/LGA/15/Bill/2012, Bangalore, Dated: 30.3.2012**

The following Bill was introduced in Legislative Assembly on 30.3.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿಮೂರನೇ ಅಧಿವೇಶನ**

## ಕರ್ನಾಟಕ ಪೌರನಿಗಮಗಳ ಮತ್ತು ಕೆಲವು ಇತರೆ ಕಾನೂನು (ತಿದ್ದುಪಡಿ) ವಿಧೇಯಕ, 2012

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 15)**

ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ನ್ನು ಮತ್ತು ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ನ್ನು (1977ರ ಕರ್ನಾಟಕ ಅಧಿನಿಯಮ 14) ಮತ್ತು ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ 22) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ಮೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಪೌರನಿಗಮಗಳು ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ) ವಿಧೇಯಕ, 2012 ಎಂದು ಕರೆಯತಕ್ಕದ್ದು.

(2) ಇದು 2012ನೇ ಮಾರ್ಚ್ 14ನೇ ದಿನಾಂಕದಿಂದ ಜಾರಿಗೆ ಬಂದಿದೆಯೆಂದು ಭಾವಿಸತಕ್ಕದ್ದು.

**2. 1977ರ ಕರ್ನಾಟಕ ಅಧಿನಿಯಮ 14ಕ್ಕೆ ತಿದ್ದುಪಡಿ.–** ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 ರಲ್ಲಿ (1977ರ ಕರ್ನಾಟಕ ಅಧಿನಿಯಮ 14),–

(1) 102ಡಿ ಪ್ರಕರಣದ (3)ನೇ ಉಪಪ್ರಕರಣದಲ್ಲಿನ ಪರಂತುಕವನ್ನು ಬಿಟ್ಟುಬಿಡತಕ್ಕದ್ದು;

(2) 102ಹೆಚ್ ಪ್ರಕರಣದ (2)ನೇ ಉಪಪ್ರಕರಣದಲ್ಲಿ "ಒಬ್ಬ ಕಾರ್ಯದರ್ಶಿಯನ್ನು ಮತ್ತು ಈ ಅಧಿನಿಯಮದ ಅಡಿಯಲ್ಲಿ ಅದರ ಪ್ರಕಾರ್ಯಗಳನ್ನು ನೆರವೇರಿಸುವುದಕ್ಕಾಗಿ ಮಂಡಲಿಗೆ ಅಗತ್ಯವಾಗಬಹುದಾದ ಅಂಥ ಇತರ ಅಧಿಕಾರಿಗಳನ್ನು" ಎಂಬ ಪದಗಳಿಗೆ " ಈ ಅಧಿನಿಯಮದ ಅಡಿಯಲ್ಲಿ ಅದರ ಪ್ರಕಾರ್ಯಗಳನ್ನು ನೆರವೇರಿಸುವುದಕ್ಕಾಗಿ ಮಂಡಲಿಗೆ ಅಗತ್ಯವಾಗಬಹುದಾದ ಅಧಿಕಾರಿಗಳನ್ನು ಮತ್ತು ಸಿಬ್ಬಂದಿಯನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(3) 102ಪಿ ಪ್ರಕರಣದ (1)ನೇ ಉಪಪ್ರಕರಣದಲ್ಲಿ "ವರ್ಷವನ್ನು" ಎಂಬ ಪದವನ್ನು ಬಿಟ್ಟುಬಿಡತಕ್ಕದ್ದು;

(4) 102ಆರ್ ಪ್ರಕರಣದ (1)ನೇ ಉಪಪ್ರಕರಣದಲ್ಲಿ "ನಿಯಮಗಳನ್ನು ರಚಿಸುವ" ಎಂಬ ಪದಗಳಿಗೆ "ವಿನಿಯಮಗಳನ್ನು ರಚಿಸುವ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(5) 102ಟಿ ಪ್ರಕರಣದಲ್ಲಿ " ಗ್ರೂಪ್ ಎ ದರ್ಜೆಗೆ ಕಡಿಮೆಯಲ್ಲದ ದರ್ಜೆಯ " ಎಂಬ ಪದಗಳಿಗೆ " ಕರ್ನಾಟಕ ಆಡಳಿತ ಸೇವೆ ಅಥವಾ ಕರ್ನಾಟಕ ಪೌರಾಡಳಿತ ಸೇವೆಯ ಗ್ರೂಪ್ ಎ ದರ್ಜೆಗೆ ಕಡಿಮೆಯಲ್ಲದ ಹಿರಿಯ ಶ್ರೇಣಿಯ " ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(6) 150ನೇ ಪ್ರಕರಣದಲ್ಲಿ,–

(i) (2–ಎ) ಮತ್ತು (2–ಬಿ) ಉಪಪ್ರಕರಣಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2–ಎ) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಉಪಬಂಧಗಳಿಗೆ ಒಳಪಟ್ಟು, ಪೌರನಿಗಮಗಳ ಸ್ವೀಕೃತಿ ಮತ್ತು ವೆಚ್ಚಗಳ ಎಲ್ಲಾ ವ್ಯವಹರಣೆಗಳ ಲೆಕ್ಕಪರಿಶೋಧನೆಯು ಭಾರತದ ನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರ ತಾಂತ್ರಿಕ ಮಾರ್ಗದರ್ಶನ ಮತ್ತು ಮೇಲ್ವಿಚಾರಣೆಗೆ ಒಳಪಟ್ಟಿರತಕ್ಕದ್ದು ಮತ್ತು ಆತನು ವಾರ್ಷಿಕ ತಾಂತ್ರಿಕ ಪರಿಶೀಲನಾ ವರದಿಯನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(2–ಬಿ) ರಾಜ್ಯ ಲೆಕ್ಕಪತ್ರಗಳ ಇಲಾಖೆಯ ನಿಯಂತ್ರಕರು, ಎಲ್ಲಾ ಪೌರನಿಗಮಗಳಿಗೆ ಸಂಬಂಧಿಸಿದಂತೆ ಕ್ರೋಢೀಕೃತ ವಾರ್ಷಿಕ ಲೆಕ್ಕಪರಿಶೋಧನಾ ವರದಿಯನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು."

(ii) (2–ಸಿ) ಮತ್ತು (2–ಡಿ) ಉಪಪ್ರಕರಣಗಳನ್ನು ಬಿಟ್ಟುಬಿಡತಕ್ಕದ್ದು.

**3. 1964ರ ಕರ್ನಾಟಕ ಅಧಿನಿಯಮ 22ಕ್ಕೆ ತಿದ್ದುಪಡಿ.–** ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 ರಲ್ಲಿ (1964ರ ಕರ್ನಾಟಕ ಅಧಿನಿಯಮ 22),–

(i) 290ನೇ ಪ್ರಕರಣದ (1)ನೇ ಉಪಪ್ರಕರಣದ ಪರಂತುಕದಲ್ಲಿ "ಒಂದು ಪೌರಸಭೆಯಲ್ಲಿಯ ವರ್ಷವೊಂದರ ವೆಚ್ಚವು" ಎಂಬ ಪದಗಳಿಗೆ, "ಎಲ್ಲಾ ನಗರ ಮುನಿಸಿಪಲ್ ಕೌನ್ಸಿಲ್‌ಗಳು, ಪಟ್ಟಣ ಮುನಿಸಿಪಲ್ ಕೌನ್ಸಿಲ್‌ಗಳು ಮತ್ತು ಪಟ್ಟಣ ಪಂಚಾಯತಿಗಳ ವರ್ಷವೊಂದರ ಲೆಕ್ಕಪರಿಶೋಧನೆಯು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ii) 295ನೇ ಪ್ರಕರಣದಲ್ಲಿ (6) ಮತ್ತು (7)ನೇ ಉಪಪ್ರಕರಣಗಳಿಗೆ ಈ ಮುಂದಿನವುಗಳನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(6) ರಾಜ್ಯ ಲೆಕ್ಕಪತ್ರಗಳ ಇಲಾಖೆಯ ನಿಯಂತ್ರಕರು, ಎಲ್ಲಾ ನಗರ ಮುನಿಸಿಪಲ್ ಕೌನ್ಸಿಲ್‌ಗಳಿಗೆ, ಪಟ್ಟಣ ಮುನಿಸಿಪಲ್ ಕೌನ್ಸಿಲ್‌ಗಳಿಗೆ ಮತ್ತು ಪಟ್ಟಣ ಪಂಚಾಯತಿಗಳಿಗೆ ಸಂಬಂಧಪಟ್ಟ ಕ್ರೋಢೀಕೃತ ವಾರ್ಷಿಕ ಲೆಕ್ಕಪರಿಶೋಧನಾ ವರದಿಯನ್ನು ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(7) 290ನೇ ಪ್ರಕರಣದ (1)ನೇ ಉಪಪ್ರಕರಣ ಅಡಿಯಲ್ಲಿ ಭಾರತದ ನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರು ವಾರ್ಷಿಕ ತಾಂತ್ರಿಕ ಪರಿಶೀಲನಾ ವರದಿಯನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು."

**4. ನಿರಸನ ಮತ್ತು ಉಳಿಸುವಿಕೆಗಳು.–** (1) ಕರ್ನಾಟಕ ಪೌರನಿಗಮಗಳು ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ) ಅಧ್ಯಾದೇಶ, 2012ನ್ನು (2012ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 1) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸನಗೊಳಿಸಿದ್ದಾಗ್ಯೂ, ಸದರಿ ಅಧ್ಯಾದೇಶದ ಮೂಲಕ ಮಾಡಲಾದ ಯಾವುದೇ ಕಾರ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಅಡಿಯಲ್ಲಿ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಸದರಿ ಸ್ಥಳೀಯ ಸಂಸ್ಥೆಗಳ ಮೇಲ್ವಿಚಾರಣೆ ಮತ್ತು ತಾಂತ್ರಿಕ ಲೆಕ್ಕಪರಿಶೋಧನೆ ಮಾಡುವುದನ್ನು ನಿಯಂತ್ರಕರು ಮತ್ತು ಮಹಾಲೇಖಪಾಲರಿಗೆ ವಹಿಸಬೇಕು ಎಂಬುದು ಸ್ಥಳೀಯ ಸಂಸ್ಥೆಗಳಿಗೆ ನಿರ್ವಹಣಾ ಅನುದಾನಗಳನ್ನು ನೀಡುವುದಕ್ಕೆ ಹದಿಮೂರನೇ ಹಣಕಾಸು ಆಯೋಗವು ವಿಧಿಸಿದ ಒಂಭತ್ತು ಷರತ್ತುಗಳಲ್ಲಿ ಒಂದಾಗಿದೆ. ಈ ಷರತ್ತನ್ನು 2012ರ ಮಾರ್ಚ್ ಮುಕ್ತಾಯವಾಗುವುದಕ್ಕೆ ಮೊದಲು ರಾಜ್ಯ ಸರ್ಕಾರವು ಈಡೇರಿಸಬೇಕಾಗಿದೆ. ಮಹಾಲೇಖಪಾಲರೂ ಸಹ ಕೆಲವು ಮಾರ್ಪಾಟುಗಳನ್ನು ಸೂಚಿಸಿದ್ದಾರೆ.

ಆದ್ದರಿಂದ ಮೇಲಿನವುಗಳಿಗೆ ಉಪಬಂಧ ಕಲ್ಪಿಸಲು ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಮತ್ತು ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ ಸಂಖ್ಯೆ 22) ತಿದ್ದುಪಡಿ ಮಾಡುವುದನ್ನು ಅವಶ್ಯಕವೆಂದು ಪರಿಗಣಿಸಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾದ್ದರಿಂದ ಮತ್ತು ಕರ್ನಾಟಕ ರಾಜ್ಯ ವಿಧಾನಮಂಡಲದ ಉಭಯ ಸದನಗಳು ಅಧಿವೇಶನದಲ್ಲಿಲ್ಲದಿದ್ದುದರಿಂದ ಕರ್ನಾಟಕ ಪೌರನಿಗಮಗಳು ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ) ಅಧ್ಯಾದೇಶ, 2012 ನ್ನು (2012ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 1) ದಿನಾಂಕ : 14.03.2012 ರಂದು ಪ್ರಖ್ಯಾಪಿಸಲಾಗಿದೆ.

ಸದರಿ ಅಧ್ಯಾದೇಶದ ಬದಲಾಗಿ ಈ ವಿಧೇಯಕ.

## ಕರ್ನಾಟಕ ವಿಧಾನ ಸಭೆಯ ಕಾರ್ಯವಿಧಾನ ಮತ್ತು ನಡವಳಿಗಳ ನಿಯಮ 80ರ (1)ನೇ ಉಪ ನಿಯಮದ ಅಡಿಯಲ್ಲಿ ಅಗತ್ಯಪಡಿಸಲಾದಂತೆ ವಿವರಣಾತ್ಮಕ ಹೇಳಿಕೆ

ಸದರಿ ಸ್ಥಳೀಯ ಸಂಸ್ಥೆಗಳ ಮೇಲ್ವಿಚಾರಣೆ ಮತ್ತು ತಾಂತ್ರಿಕ ಲೆಕ್ಕಪರಿಶೋಧನೆ ಮಾಡುವುದನ್ನು ನಿಯಂತ್ರಕರು ಮತ್ತು ಮಹಾಲೇಖಪಾಲರಿಗೆ ವಹಿಸಬೇಕು ಎಂಬುದು ಸ್ಥಳೀಯ ಸಂಸ್ಥೆಗಳಿಗೆ ನಿರ್ವಹಣಾ ಅನುದಾನಗಳನ್ನು ನೀಡುವುದಕ್ಕೆ ಹದಿಮೂರನೇ ಹಣಕಾಸು ಆಯೋಗವು ವಿಧಿಸಿದ ಒಂಭತ್ತು ಷರತ್ತುಗಳಲ್ಲಿ ಒಂದಾಗಿದೆ. ಈ ಷರತ್ತನ್ನು 2012ರ ಮಾರ್ಚ್ ಮುಕ್ತಾಯವಾಗುವುದಕ್ಕೆ ಮೊದಲು ರಾಜ್ಯ ಸರ್ಕಾರವು ಈಡೇರಿಸಬೇಕಾಗಿದೆ. ಮಹಾಲೇಖಪಾಲರೂ ಸಹ ಕೆಲವು ಮಾರ್ಪಾಟುಗಳನ್ನು ಸೂಚಿಸಿದ್ದಾರೆ.

ಆದ್ದರಿಂದ ಮೇಲಿನವುಗಳಿಗೆ ಉಪಬಂಧ ಕಲ್ಪಿಸಲು ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಮತ್ತು ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ ಸಂಖ್ಯೆ 22) ತಿದ್ದುಪಡಿ ಮಾಡುವುದನ್ನು ಅವಶ್ಯಕವೆಂದು ಪರಿಗಣಿಸಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾದ್ದರಿಂದ ಮತ್ತು ಕರ್ನಾಟಕ ರಾಜ್ಯ ವಿಧಾನಮಂಡಲದ ಉಭಯ ಸದನಗಳು ಅಧಿವೇಶನದಲ್ಲಿಲ್ಲದಿದ್ದುದರಿಂದ ಕರ್ನಾಟಕ ಪೌರನಿಗಮಗಳು ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ) ಅಧ್ಯಾದೇಶ, 2012 ನ್ನು (2012ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 1) ದಿನಾಂಕ : 14.03.2012 ರಂದು ಪ್ರಖ್ಯಾಪಿಸಲಾಗಿದೆ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಳ್ಳುವುದಿಲ್ಲ.

**ಎಸ್. ಸುರೇಶ್ ಕುಮಾರ್**
ನಗರಾಭಿವೃದ್ಧಿ, ಕಾನೂನು ಮತ್ತು ಸಂಸದೀಯ
ವ್ಯವಹಾರಗಳ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ (1977ರ ಕರ್ನಾಟಕ ಅಧಿನಿಯಮ 14)**

**ಉದ್ಧೃತ ಭಾಗ**

Xx xx xx

**102ಡಿ. ಮಂಡಲಿಯ ರಚನೆ.–** Xx xx xx

(3) ಮಂಡಲಿಯ ಅಧ್ಯಕ್ಷರು ಮತ್ತು ಸದಸ್ಯರುಗಳ ಐದು ವರ್ಷಗಳ ಅವಧಿಯವರೆಗೆ ಪದಧಾರಣವನ್ನು ಮಾಡತಕ್ಕದ್ದು:

ಪರಂತು, ಅಧ್ಯಕ್ಷರ ಅಥವಾ ಸದಸ್ಯರ ಪದಾವಧಿಯು ಮುಕ್ತಾಯವಾದ ಮೇಲೆ ಅವನು ಅಧ್ಯಕ್ಷ ಅಥವಾ ಸದಸ್ಯನಾಗಿ ಮರು ನೇಮಕಗೊಳ್ಳಲು ಅರ್ಹನಾಗತಕ್ಕದ್ದಲ್ಲ ಮತ್ತು ರಾಜ್ಯ ಸರ್ಕಾರದಿಂದ ಅಥವಾ ರಾಜ್ಯ ಸರ್ಕಾರದಿಂದ ಅಥವಾ ಅದರ ನಿಯಂತ್ರಣದಲ್ಲಿರುವ ಯಾವುದೇ ನಿಗಮ, ಕಂಪನಿ, ಸಂಘ ಅಥವಾ ವಿಶ್ವವಿದ್ಯಾಲಯದ ಯಾವುದೇ ಲಾಭದಾಯಕ ಹುದ್ದೆಗೆ ನೇಮಕಗೊಳ್ಳಲು ಅರ್ಹನಾಗತಕ್ಕದ್ದಲ್ಲ.

Xx xx xx

**102ಎಚ್. ಸಿಬ್ಬಂದಿಯ ನೇಮಕಾತಿ.–** (1) ಮಂಡಲಿಯು, ವಿನಿಯಮಗಳ ಮೂಲಕ ಮಂಡಲಿಯ ನೌಕರರ ನೇಮಕಾತಿ ವಿಧಾನ ಮತ್ತು ಸೇವಾ ಷರತ್ತುಗಳಿಗಾಗಿ ಉಪಬಂಧಗಳನ್ನು ಕಲ್ಪಿಸಬಹುದು.

(2) ಈ ಸಂಬಂಧದಲ್ಲಿ ರಚಿಸಿದ ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಿದ ಅಂಥ ಸೇವಾ ಷರತ್ತುಗಳಿಗೆ ಒಳಪಟ್ಟು, ಮಂಡಲಿಯು, ಒಬ್ಬ ಕಾರ್ಯದರ್ಶಿಯನ್ನು ಮತ್ತು ಈ ಅಧಿನಿಯಮದ ಅಡಿಯಲ್ಲಿ ಅದರ ಪ್ರಕಾರ್ಯಗಳನ್ನು ನೆರವೇರಿಸುವುದಕ್ಕಾಗಿ ಮಂಡಲಿಗೆ ಅಗತ್ಯವಾಗಬಹುದಾದ ಅಂಥ ಇತರ ಅಧಿಕಾರಿಗಳನ್ನು ನೇಮಕ ಮಾಡಬಹುದು.

Xx xx xx

**102ಪಿ. ವೆಚ್ಚ ಮತ್ತು ಲೆಕ್ಕಪತ್ರಗಳು.–** (1) ಮಂಡಲಿಯು, ರಾಜ್ಯ ಸರ್ಕಾರದ ಇಲಾಖಾ ಕಾರ್ಯದರ್ಶಿಯವರು ಚಲಾಯಿಸುವಂತಹುದೇ ಹಣಕಾಸು ಅಧಿಕಾರಗಳನ್ನು ಹೊಂದಿರತಕ್ಕದ್ದು. ಮಂಡಲಿಯು, ಅಂಥ ಹಣಕಾಸು ಅಧಿಕಾರವನ್ನು ಮೀರಿದ ವಿಷಯಗಳನ್ನು ತೀರ್ಮಾನಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

Xx xx xx

**102ಆರ್. ಅಧಿಕಾರಗಳ ಪ್ರತ್ಯಾಯೋಜನೆ.–** (1) ರಾಜ್ಯ ಸರ್ಕಾರವು ರಚಿಸಿದ ನಿಯಮಗಳಿಗೆ ಒಳಪಟ್ಟು, ಮಂಡಲಿಯು ನಿಯಮಗಳನ್ನು ರಚಿಸುವ ಅಧಿಕಾರವನ್ನು ಹೊರತುಪಡಿಸಿ, ಹಣಕಾಸು ಅಧಿಕಾರಗಳು ಒಳಗೊಂಡಂತೆ ತನ್ನ ಯಾವುವೇ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ಮಂಡಲಿಯ ಅಧ್ಯಕ್ಷರಿಗೆ ಪ್ರತ್ಯಾಯೋಜಿಸಬಹುದು.

Xx xx xx

**102ಟಿ. ಕಾರ್ಯದರ್ಶಿಯವರು ಪತ್ರ ವ್ಯವಹಾರವನ್ನು ನಡೆಸುವುದು.–** ರಾಜ್ಯ ಸರ್ಕಾರವು, ಗ್ರೂಪ್–ಎ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿಯನ್ನು ಕಾರ್ಯದರ್ಶಿಯಾಗಿ ನೇಮಿಸಬಹುದು ಮತ್ತು ಆತನು ಮಂಡಲಿಯ ಮುಖ್ಯ ಕಾರ್ಯನಿರ್ವಾಹಕನಾಗಿರತಕ್ಕದ್ದು. ಮಂಡಲಿ ಮತ್ತು ಸರ್ಕಾರ ಅಥವಾ ಇತರ ಪ್ರಾಧಿಕಾರದ ನಡುವೆ, ಈ ಅಧಿನಿಯಮದ ಮೂಲಕ ಅಥವಾ ಈ ಅಧಿನಿಯಮದ ಅಡಿಯಲ್ಲಿ ಅಥವಾ ಯಾವುದೇ ಇತರ ಕಾನೂನಿನ ಅಡಿಯಲ್ಲಿ ವ್ಯವಹರಿಸಲಾದ ಯಾವುದೇ ವಿಷಯಕ್ಕೆ ಸಂಬಂಧಿಸಿದ ಎಲ್ಲಾ ಪತ್ರ ವ್ಯವಹಾರವನ್ನು ಕಾರ್ಯದರ್ಶಿಯವರು ನಡೆಸತಕ್ಕದ್ದು

ಮತ್ತು ಅಂಥ ಪತ್ರ ವ್ಯವಹಾರದ ಪ್ರತಿಯನ್ನು ಕಾರ್ಯದರ್ಶಿಯವರು ಮಂಡಲಿಯ ಅಧ್ಯಕ್ಷರಿಗೆ ಕಳುಹಿಸತಕ್ಕದ್ದು. ಕಾರ್ಯದರ್ಶಿಯು ಮಂಡಲಿಯ ಪರವಾಗಿ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಒಳಗಾಗತಕ್ಕದ್ದು.

Xx xx xx

**150. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** Xx xx xx

(2ಎ) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಉಪಬಂಧಗಳಿಗೊಳಪಟ್ಟು, ರಾಜ್ಯದಲ್ಲಿರುವ ಪ್ರತಿಯೊಂದು ಪೌರನಿಗಮದ ವರ್ಷವೊಂದರಲ್ಲಿ ವೆಚ್ಚವು, ಪೂರಕ ಲೆಕ್ಕಪರಿಶೋಧನೆ ಮತ್ತು ವಾರ್ಷಿಕ ತಾಂತ್ರಿಕ ಮತ್ತು ಪರಿಶೀಲನಾ ವರದಿಯನ್ನು ಸಲ್ಲಿಸುವ ಮೂಲಕವಾಗಿ ಭಾರತದ ನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರು ನೀಡುವ ತಾಂತ್ರಿಕ ಮಾರ್ಗದರ್ಶನ ಮತ್ತು ಮೇಲ್ವಿಚಾರಣೆಗೆ ಒಳಪಟ್ಟಿರತಕ್ಕದ್ದು.

(2ಬಿ) ರಾಜ್ಯ ಲೆಕ್ಕಪತ್ರ ಇಲಾಖೆಯ, ನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಪೌರ ಪ್ರಾಧಿಕಾರಗಳಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರದ ಮುಖ್ಯ ಲೆಕ್ಕ ಪರಿಶೋಧಕರು ಸಲ್ಲಿಸಿದ ರಾಜ್ಯ ಲೆಕ್ಕಪತ್ರಗಳ ಇಲಾಖೆಯ ವಾರ್ಷಿಕ ವರದಿಯನ್ನು ವಿಧಾನಮಂಡಲದ ಮುಂದೆ ಮಂಡಿಸುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(2ಸಿ) ರಾಜ್ಯ ಲೆಕ್ಕಪತ್ರಗಳ ಇಲಾಖೆಯ ನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು ಹೊರತುಪಡಿಸಿ, ಎಲ್ಲಾ ಪೌರನಿಗಮಗಳಿಗೆ ಸಂಬಂಧಿಸಿದಂತೆ ರಾಜ್ಯ ಲೆಕ್ಕಪತ್ರಗಳ ಇಲಾಖೆಯ ವಾರ್ಷಿಕ ವರದಿಯನ್ನು, ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಉಪಬಂಧಗಳ ಅಡಿಯಲ್ಲಿ ನೇಮಕಗೊಂಡ ಪೌರಾಡಳಿತ ನಿರ್ದೇಶಕರಿಗೆ ಕಳುಹಿಸತಕ್ಕದ್ದು ಮತ್ತು ಅವರು ಅಂಥ ವರದಿಯನ್ನು ರಾಜ್ಯ ವಿಧಾನಮಂಡಲದ ಮುಂದೆ ಮಂಡಿಸುವುದಕ್ಕಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(2ಡಿ) ಭಾರತದ ನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರವರು (2ಎ) ಉಪಪ್ರಕರಣದ ಅಡಿಯಲ್ಲಿ ವಾರ್ಷಿಕ ತಾಂತ್ರಿಕ ಮತ್ತು ಪರಿಶೀಲನಾ ವರದಿಯನ್ನು,–

(i) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಂದರ್ಭದಲ್ಲಿ ರಾಜ್ಯ ವಿಧಾನಮಂಡಲದ ಮುಂದೆ ಮಂಡಿಸುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು;

(ii) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು ಹೊರತುಪಡಿಸಿ ಪೌರ ನಿಗಮಗಳ ಸಂದರ್ಭದಲ್ಲಿ, ಪೌರಾಡಳಿತ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು, ಅವರು ಅಂಥ ವರದಿಯನ್ನು ರಾಜ್ಯ ವಿಧಾನಮಂಡಲದ ಮುಂದೆ ಮಂಡಿಸುವುದಕ್ಕಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು."

Xx xx xx

**ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 22)**

**ಉದ್ಧೃತ ಭಾಗ**

Xx xx xx

**290. ಲೆಕ್ಕಪತ್ರಗಳ ಪರಿಶೋಧನೆ.–** (1) ಪೌರನಿಗಮಗಳ ಲೆಕ್ಕಪತ್ರಗಳನ್ನು ಕಾಲಕಾಲಕ್ಕೆ ಮತ್ತು ಪ್ರತಿವರ್ಷ ಕನಿಷ್ಟ ಒಂದು ಸಲ, ಸರ್ಕಾರವು ನೇಮಕಾತಿ ಮಾಡಿದ ಒಬ್ಬರು ಲೆಕ್ಕಪರಿಶೋಧಕರ ಮೂಲಕ ಮತ್ತು ಅಂಥ ಇತರ ಏಜೆನ್ಸಿಯ ಮೂಲಕ ಕೂಡಾ, ಯಾವುದಾದರೂ ಇದ್ದಲ್ಲಿ, ಪೌರನಿಗಮಗಳ ಪರಿಷತ್ತಿನ ನಿಯಮಗಳಲ್ಲಿ ನಿಯಮಿಸಬಹುದಾದಂತೆ ಲೆಕ್ಕಪರಿಶೋಧಿಸಬೇಕು.

Xx xx xx

**295. ಪೌರನಿಗಮ ಪರಿಷತ್ತು ದೋಷಗಳನ್ನು ಪರಿಹರಿಸುವುದು.– 293ನೇ ಪ್ರಕರಣದ ಅಡಿಯಲ್ಲಿ ಲೆಕ್ಕಪರಿಶೋಧಕರ ವರದಿಯ ತರುವಾಯ ಅನುಸರಿಸಬೇಕಾದ ಕಾರ್ಯವಿಧಾನ.–**

Xx xx xx

"(6) ರಾಜ್ಯ ಲೆಕ್ಕಪತ್ರಗಳ ಇಲಾಖೆಯ ನಿಯಂತ್ರಕರು, ಎಲ್ಲಾ ಪೌರಸಭೆಗಳಿಗೆ ಸಂಬಂಧಿಸಿದಂತೆ ರಾಜ್ಯ ಲೆಕ್ಕಪತ್ರಗಳ ಇಲಾಖೆಯ ವಾರ್ಷಿಕ ವರದಿಯನ್ನು ಪೌರಾಡಳಿತ ನಿರ್ದೇಶಕರಿಗೆ ಕಳುಹಿಸತಕ್ಕದ್ದು ಮತ್ತು ಆತನು ಅಂಥ ವರದಿಯನ್ನು ರಾಜ್ಯ ವಿಧಾನ ಮಂಡಲದ ಮುಂದೆ ಮಂಡಿಸುವುದಕ್ಕಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(7) ಭಾರತದ ನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರು 290ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ವಾರ್ಷಿಕ ತಾಂತ್ರಿಕ ಮತ್ತು ಪರಿಶೀಲನಾ ವರದಿಯನ್ನು ಪೌರಾಡಳಿತ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು ಮತ್ತು ಆತನು ಅಂಥ ವರದಿಯನ್ನು ರಾಜ್ಯ ವಿಧಾನಮಂಡಲದ ಮುಂದೆ ಮಂಡಿಸುವುದಕ್ಕಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು."

Xx xx xx

## KARNATAKA LEGISLATIVE ASSEMBLY

### THIRTEENTH LEGISLATIVE ASSEMBLY

### THIRTEENTH SESSION

## THE KARNATAKA MUNICIPAL CORPORATIONS AND CERTAIN OTHER LAW (AMENDMENT) BILL, 2012

### (L.A. Bill No. 15 of 2012)

A Bill further to amend the Karnataka Municipal Corporations Act, 1976 and the Karnataka Municipalities Act, 1964.

Whereas it is expedient further to amend the Karnataka Municipal Corporations Act, 1976 (Karnataka Act 14 of 1977) and the Karnataka Municipalities Act, 1964 (Karnataka Act 22 of 1964) for the purposes hereinafter appearing;

Be it enacted by the Karnataka State Legislature in the sixty-third year of the Republic of India, as follows:-

**1. Short title and commencement.-** (1) This Act may be called the Karnataka Municipal Corporations and certain other law (Amendment) Act, 2012.

(2) It shall be deemed to have come into force with effect from the 14th day of March, 2012.

**2. Amendment of the Karnataka Act 14 of 1977.-** In the Karnataka Municipal Corporations Act, 1976 (Karnataka Act 14 of 1977),-

(1) in section 102D, in sub-section (3), the proviso shall be omitted;

(2) in section 102H, in sub-section (2), for the words "a Secretary and such other officers", the words "officers and staff" shall be substituted;

(3) in section 102P, in sub-section (1), the word "year" shall be omitted;

(4) in section 102R, in sub-section (1), for the words "make rules", the words "make regulations" shall be substituted;

(5) in section 102T, after the words "not below the rank of Group-A senior", the words "scale officer of Karnataka Administrative Service or Karnataka Municipal Administrative Service" shall be inserted; and

(6) in section 150,-

(i) for sub-sections (2-A) and (2-B), the following shall be substituted, namely:-

"(2-A) Subject to the provisions of any law for the time being in force, the audit of all transactions of receipts and expenditure of Municipal Corporations shall be subject to technical guidance and supervision of the Comptroller and Auditor General of India and he shall send the annual technical inspection report to State Government for being placed before both Houses of the State Legislature.

(2-B) The Controller, State Accounts Department shall send Consolidated Annual Audited Report pertaining to all Municipal Corporations to the State Government for being placed before both Houses of the State Legislature."

(ii) sub-sections (2-C) and (2-D) shall be omitted.

**3. Amendment of the Karnataka Act 22 of 1964.-** In the Karnataka Municipalities Act, 1964 (Karnataka Act 22 of 1964),-

(i) in section 290, in the proviso to sub-section (1), for the words "expenditure in a municipality", the words "audit of all city Municipal Councils, Town Municipal Councils and Town Panchayats" shall be substituted; and

(ii) in section 295, for sub-sections (6) and (7), the following shall be substituted, namely:-

"(6) The Controller, State Accounts Department shall send consolidated Annual Audit Report pertaining to all City Municipal Councils, Town Municipal Councils and Town Panchayats to the State Government for being placed before both Houses of the State Legislature.

(7) The Comptroller and Auditor General of India shall send the Annual Technical Inspection Report under sub-section (1) of Section 290 to the State Government for being placed before both Houses of the State Legislature."

**4. Repeal and savings.-** (1) The Karnataka Municipal Corporations and certain other Law (Amendment) Ordinance, 2012 (Karnataka Ordinance No.1of 2012) is hereby repealed.

(2) Notwithstanding such repeal anything done or any action taken under the said Ordinance shall be deemed to have been done or taken under this Act.

## STATEMENT OF OBJECTS AND REASONS

One of the nine conditions laid down by the thirteenth Finance Commission for grant of performance grants to local bodies is to entrust the supervision and technical audit of the said Local bodies to C & A.G. This condition is to be met by the State Government before the end of March, 2012. The Accountant General also suggested few modifications.

Therefore, it was considered necessary to amend the Karnataka Municipal Corporations Act, 1976 (Karnataka Act 14 of 1977) and the Karnataka Municipalities Act, 1964 (Karnataka Act 22 of 1964)., to provide for the above.

As the matter was urgent and both the Houses of the Karnataka State Legislature were not in session, the Karnataka Municipal Corporations and certain other Law (Amendment) Ordinance, 2012 (Karnataka Ordinance No.1 of 2012) was promulgated on 14.03.2012.

This Bill seeks to replace the said Ordinance.

Hence the Bill.

## EXPLANATORY STATEMENT AS REQUIRED BY SUB-RULE (1) OF RULE 80 OF THE RULES OF PROCEDURE AND CONDUCT OF BUSINESS IN THE KARNATAKA LEGISLATIVE ASSEMBLY

One of the nine conditions laid down by the thirteenth Finance Commission for grant of performance grants to local bodies is to entrust the supervision and technical audit of the said Local bodies to C & A.G. This condition is to be met by the State Government before the end of March, 2012. The Accountant General also suggested few modifications.

Therefore, it was considered necessary to amend the Karnataka Municipal Corporations Act, 1976 (Karnataka Act 14 of 1977) and the Karnataka Municipalities Act, 1964 (Karnataka Act 22 of 1964)., to provide for the above.

As the matter was urgent and both the Houses of the Karnataka State Legislature were not in session, the Karnataka Municipal Corporations and certain other Law (Amendment) Ordinance, 2012 (Karnataka Ordinance No.1 of 2012) was promulgated on 14.03.2012.

## FINANCIAL MEMORANDUM

There is no extra expenditure involved in the proposed Legislative measure.

**S. SURESH KUMAR**
Minister for Urban Development,
Law and Parliamentary Affairs

**P. OMPRAKASHA**
Secretary
Karnataka Legislative Assembly

## ANNEXURE

**Extract from the Karnataka Municipal Corporations Act, 1976 (Karnataka Act 14 of 1977)**

**xx** **xx** **xx**

**102D. Composition of the Board.-** (1) **xx** **xx**

(3) The Chairperson and the members of the Board shall hold office for a period of five years:

Provided that on expiry of the term of the office of Chairperson or member, he shall not be eligible for reappointment as Chairperson or member and for further appointment to any office of profit under the Government of the State or in any corporation, company, society or university by or under the control of the State Government.

**xx** **xx** **xx**

**102H. Appointment of staff**.- (1) The Board may, by regulations make provisions for method of recruitment and conditions of service of the employees of the Board.

(2) Subject to such conditions of service as may be specified by regulations made in this behalf, the Board may appoint a Secretary and such other officers as may be required to enable the Board to carry out its functions under this Act.

**xx** **xx** **xx**

**102P. Expenditure and accounts.-** (1) The Board shall have the same financial powers as are exercisable by the Secretary of a department of the State Government. Matters beyond such financial year powers shall be referred by the Board to the State Government for decision.

**xx** **xx** **xx**

**102R. Delegation of powers.-** (1) Subject to the rules made by the State Government, the Board may delegate any of its powers and functions including financial powers to the Chairperson of the Board except the power to make rules.

**xx** **xx** **xx**

**102T. Secretary to carry on correspondence.-** The State Government may appoint an officer not below the rank of Group A Senior to be the Secretary of the Board who shall be the Chief Executive of the Board. All correspondence relating to any matter dealt with, by or under this Act or under any other law between the Board and the Government or other authority shall be conducted by the Secretary and the Secretary shall send copies of such correspondence to the Chairperson of the Board. The Secretary shall sue and be sued on behalf of the Board.

**150. Accounts and Audit.-** (1) **xx** **xx**

(2A) Subject to provisions of any law for the time being in force expenditure in each Municipal Corporation in a year in the State shall be subjected to technical guidance and supervision by the Comptroller and Auditor General of India through complementary audit and submission of Annual Technical and Inspection Report.

(2B) The Controller, State Accounts Department shall send Annual Report of the State Accounts Department pertaining to municipal authorities of the Bruhat Bangalore Mahanagara Palike submitted by the Chief Auditor to the State Government for being placed before the Legislature.

(2C) The Controller, State Accounts Department shall send Annual Report of the State Accounts Department pertaining to all municipal corporations other than the Bruhat Bangalore Mahanagara Palike to the Director of Municipal Administration appointed under the provisions of the Karnataka Municipalities Act, 1964 who shall in turn submit such report to the Government for placing it before the State Legislature.

(2D) The Comptroller and Auditor General of India shall submit the Annual Technical and Inspection Report under sub-section (2A),-

(i) in the case of the Bruhat Bangalore Mahanagara Palike to the State Government for placing it before the State Legislature;

(ii) in the case of Municipal Corporations other than the Bruhat Bangalore Mahanagara Palike to the Director of Municipal Administration who shall in turn submit such report to the Government for placing it before the State Legislature.

xx xx xx

**Extract from the Karnataka Municipalities Act, 1964 (Karnataka Act 22 of 1964)**

**xx xx xx**

**290. Audit of Accounts.**—(1) The municipal accounts shall from time to time and once in every year at the least, be audited by an auditor appointed by the Government and also by such other agency, if any, as may be prescribed in the rules of the municipal council:

Provided that subject to any other law for the time being in force, expenditure in a municipality in a year shall be subjected to technical guidance and supervision by the Comptroller and Auditor General of India through complementary audit and submission of Annual Technical and Inspection Report.

**xx xx xx**

**295. Municipal council to remedy defects: Procedure to be followed after report of the Auditor under section 293.**— (1) xx xx

(6) The Controller, State Accounts Department shall send Annual Report of the State Accounts Department pertaining to all the municipal councils to the Directorate of Municipal Administration who shall in turn submit such report to the Government for placing it before the State Legislature.

(7) The Comptroller and Auditor General of India shall submit the Annual Technical and Inspection Report under sub-section (1) of section 290 to the Director of Municipal Administration who shall in turn submit such report to the Government for placing it before the State Legislature.

**xx xx xx**

**P. OMPRAKASHA**
Secretary
Karnataka Legislative Assembly

| ಭಾಗ – IV-A | ಬೆಂಗಳೂರು, ಶುಕ್ರವಾರ, ಮಾರ್ಚ್ ೩೦, ೨೦೧೨ (ಚೈತ್ರ ೧೦, ಶಕ ವರ್ಷ ೧೯೩೪) | ನಂ. ೨೪೧ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/16/Bill/2012, Bangalore, Dated: 30.3.2012**

The following Bill was introduced in Legislative Assembly on 30.3.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿಮೂರನೇ ಅಧಿವೇಶನ**

## ಕರ್ನಾಟಕ ಪೌರನಿಗಮಗಳ ಮತ್ತು ಕೆಲವು ಇತರೆ ಕಾನೂನು (ಎರಡನೇ ತಿದ್ದುಪಡಿ) ವಿಧೇಯಕ, 2012

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 16)**

ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ನ್ನು ಮತ್ತು ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ನ್ನು (1977ರ ಕರ್ನಾಟಕ ಅಧಿನಿಯಮ 14) ಮತ್ತು ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ 22) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಕರ್ನಾಟಕ ಪೌರನಿಗಮಗಳು ಮತ್ತು ಕೆಲವು ಇತರ ಕಾನೂನು (ಎರಡನೇ ತಿದ್ದುಪಡಿ) ವಿಧೇಯಕ, 2012 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು ಮತ್ತು ಈ ಅಧಿನಿಯಮದ ಬೇರೆಬೇರೆ ಉಪಬಂಧಗಳಿಗೆ ಬೇರೆ ಬೇರೆ ದಿನಾಂಕಗಳನ್ನು ಗೊತ್ತುಪಡಿಸಬಹುದು.

**2. 1977ರ ಕರ್ನಾಟಕ ಅಧಿನಿಯಮ 14ಕ್ಕೆ ತಿದ್ದುಪಡಿ.**– ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 ರಲ್ಲಿ (1977ರ ಕರ್ನಾಟಕ ಅಧಿನಿಯಮ ಸಂಖ್ಯೆ 14),–

(i) 103ಬಿ ಪ್ರಕರಣದ ನಂತರ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"103 ಸಿ. ನಗರ ಸಾರಿಗೆಯ ಉಪಕರವನ್ನು ವಿಧಿಸುವುದು.**– (1) ಈ ಅಧಿನಿಯಮದ 103 ಅಥವಾ 108ಎ ಪ್ರಕರಣದಡಿಯಲ್ಲಿ ವಿಧಿಸಿದ ಮತ್ತು ಸಂಗ್ರಹಿಸಲಾದ ಸ್ವತ್ತು ತೆರಿಗೆಯ ಮೇಲೆ ಶೇಕಡ ಎರಡಕ್ಕಿಂತ ಹೆಚ್ಚಿರದ ಅಂಥ ದರಗಳಲ್ಲಿ ನಗರ ಸಾರಿಗೆ ಉಪಕರವನ್ನು ವಿಧಿಸತಕ್ಕದ್ದು ಮತ್ತು ಸಂಗ್ರಹಿಸತಕ್ಕದ್ದು ಮತ್ತು ಇದನ್ನು ಹತ್ತಿರದ ರೂಪಾಯಿಗೆ ಪೂರ್ಣಾಂಕಗೊಳಿಸತಕ್ಕದ್ದು.

(2) ಈ ಪ್ರಕರಣದಲ್ಲಿ ಇರುವುದಾವುದೂ ಯಾವುದೇ ಇತರ ಅಧಿನಿಯಮದ ಉಪಬಂಧಗಳ ಜಾರಿಗೆ ಬಾಧಕವಾಗತಕ್ಕದ್ದಲ್ಲ ಮತ್ತು ಈ ಅಧಿನಿಯಮದಡಿಯಲ್ಲಿ ನಗರ ಸಾರಿಗೆ ಉಪಕರವನ್ನು ವಿಧಿಸುವುದು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಅಡಿಯಲ್ಲಿ ವಿಧಿಸಬಹುದಾದ ಯಾವುದೇ ಇತರ ಸುಂಕ ಅಥವಾ ಉಪಕರಕ್ಕೆ ಹೆಚ್ಚುವರಿಯಾಗಿರತಕ್ಕದ್ದು ಮತ್ತು ಬದಲಾಗಿರತಕ್ಕದ್ದಲ್ಲ.

(3) ನಗರ ಸಾರಿಗೆ ಉಪಕರದ ರೂಪದಲ್ಲಿ ಸಂಗ್ರಹಿಸಿದ ಎಲ್ಲಾ ಹಣವನ್ನು 149ಎ ಪ್ರಕರಣದ ಅಡಿಯಲ್ಲಿ ಸೃಜಿಸಿದ ನಗರ ಸಾರಿಗೆ ನಿಧಿಗೆ ಜಮೆ ಮಾಡತಕ್ಕದ್ದು.

(4) ರಾಜ್ಯ ಸರ್ಕಾರವು, ನಿಯಮಗಳ ಮೂಲಕ, ನಗರ ಸಾರಿಗೆ ನಿಧಿಯ ಸಂಗ್ರಹಣೆ, ನಿರ್ವಹಣೆ ಮತ್ತು ಬಳಕೆಯ ವಿಧಾನವನ್ನು ನಿಯಮಿಸಬಹುದು".

(ii) 149ನೇ ಪ್ರಕರಣದ ನಂತರ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"149ಎ.– ನಗರ ಸಾರಿಗೆ ನಿಧಿ** – (1) ನಗರ ಸಾರಿಗೆ ನಿಧಿ ಎಂದು ಕರೆಯುವ ಒಂದು ನಿಧಿಯನ್ನು ರಚಿಸತಕ್ಕದ್ದು ಮತ್ತು ಇದು,–

(i) ಈ ಅಧಿನಿಯಮದ 103ಸಿ ಪ್ರಕರಣದ ಅಡಿಯಲ್ಲಿ ಮತ್ತು ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 22) 94ಎ ಪ್ರಕರಣದ ಅಡಿಯಲ್ಲಿ ಸಂಗ್ರಹಿಸಿದ ನಗರ ಸಾರಿಗೆ ಉಪಕರ;

(ii) ರಾಜ್ಯ ಸರ್ಕಾರದಿಂದ ಮತ್ತು ಕೇಂದ್ರ ಸರ್ಕಾರದಿಂದ ಸ್ವೀಕರಿಸಿದ ಎಲ್ಲಾ ಅನುದಾನಗಳು ಯಾವುವಾದರೂ ಇದ್ದಲ್ಲಿ; ಮತ್ತು

(iii) ಈ ನಿಧಿಯ ಆದಾಯದ ಯಾವುದೇ ಇತರ ಸ್ವೀಕೃತಿಗಳು, ಬಡ್ಡಿ ಅಥವಾ ಯಾವುದೇ ಇತರ ಸ್ವರೂಪ,

– ಇವುಗಳನ್ನು ಒಳಗೊಂಡಿರತಕ್ಕದ್ದು.

(2) ನಗರ ಸಾರಿಗೆ ನಿಧಿಯನ್ನು,

(i) ನಗರ ಸಾರಿಗೆ ಮತ್ತು ಅವುಗಳ ಸಮಗ್ರ ನಿರ್ವಹಣೆಗೆ ಸಂಬಂಧದಲ್ಲಿ ಸಮನ್ವಯಗೊಳಿಸಲಾಗಿರುವ ಯೋಜನೆಯನ್ನು ಪರಿಯೋಜನೆಗಳನ್ನು ರೂಪಿಸಲು ಮತ್ತು ಅನುಷ್ಠಾನಗೊಳಿಸಲು;

(ii) ಸಾರ್ವಜನಿಕ ಸಾರಿಗೆಯನ್ನು ಬಳಸಲು ಪ್ರೋತ್ಸಾಹಿಸುವುದಕ್ಕೆ ಅಧ್ಯಯನ ಮಾಡಲು ಸಂಶೋಧನೆ ನಡೆಸಲು, ಉತ್ತೇಜಿಸಲು ಮತ್ತು ಪ್ರಚಾರವನ್ನು ಕೈಗೊಳ್ಳಲು;

(iii) ನಗರ ಸ್ಥಳೀಯ ಸಂಸ್ಥೆಗಳು ಏಜೆನ್ಸಿಗಳಲ್ಲಿ, ಪರಸ್ಥಳ ಏಜೆನ್ಸಿಗಳಲ್ಲಿ ಮತ್ತು ರಾಜ್ಯ ಸರ್ಕಾರದಲ್ಲಿ ಸಾಮರ್ಥ್ಯ ನಿರ್ಮಾಣ ಮಾಡಲು; ಮತ್ತು

(iv) ರಾಜ್ಯ ಸರ್ಕಾರವು ನಿಯಮಿಸಬಹುದಾದ ಯಾವುದೇ ಇತರ ಉದ್ದೇಶಗಳಿಗೆ,

–ಬಳಸಿಕೊಳ್ಳತಕ್ಕದ್ದು.

(3) ನಗರ ಭೂ ಸಾರಿಗೆ ನಿರ್ದೇಶನಾಲಯವು, (1)ನೇ ಉಪಪ್ರಕರಣದ ಅಡಿಯಲ್ಲಿ ರಚಿತವಾದ ನಿಧಿಯನ್ನು ನಿರ್ವಹಿಸುವ ಕಾರ್ಯಾಲಯವಾಗಿರತಕ್ಕದ್ದು.

(4) ನಗರ ಸಾರಿಗೆ ನಿಧಿಯಿಂದ ಬರುವ ಎಲ್ಲಾ ಸ್ವೀಕೃತಿಗಳು ಮತ್ತು ವೆಚ್ಚದ ಲೆಕ್ಕಪತ್ರಗಳನ್ನು ನಿಯಮಿಸಲಾದ ಅಂಥ ರೀತಿಯಲ್ಲಿ ಮತ್ತು ಅಂಥ ನಮೂನೆಯಲ್ಲಿ ಇಡತಕ್ಕದ್ದು.

(5) ರಾಜ್ಯ ಸರ್ಕಾರವು, ರಾಜ್ಯ ಲೆಕ್ಕಪತ್ರಗಳ ನಿಯಂತ್ರಕರ ಉಸ್ತುವಾರಿ ಮತ್ತ ನಿಯಂತ್ರಣಕ್ಕೆ ಒಳಪಟ್ಟು ನಗರ ಸಾರಿಗೆ ನಿಧಿಯ ಲೆಕ್ಕಪರಿಶೋಧನೆಯನ್ನು ನಡೆಸಲು ಲೆಕ್ಕಪರಿಶೋಧಕರನ್ನಾಗಿ ತನ್ನ ಒಬ್ಬ ಅಧಿಕಾರಿಯನ್ನು ನೇಮಕ ಮಾಡತಕ್ಕದ್ದು ಮತ್ತು ಇವರು ನಗರ ಸಾರಿಗೆ ನಿಧಿಗೆ ಸಂಬಂಧಿಸಿದಂತೆ ಎಲ್ಲಾ ಲೆಕ್ಕಪತ್ರಗಳ ಪುಸ್ತಕಗಳನ್ನು ಮತ್ತು ಎಲ್ಲಾ ಸ್ವೀಕೃತಿಗಳು ಹಾಗೂ ವೆಚ್ಚಗಳನ್ನು ನೋಡುವ ಅವಕಾಶವನ್ನು ಹೊಂದಿರತಕ್ಕದ್ದು ಮತ್ತು ನಗರ ಭೂ ಸಾರಿಗೆ ನಿರ್ದೇಶಕರು ಅಥವಾ ಸಂದರ್ಭಾನುಸಾರ ಪೌರಾಡಳಿತದ ನಿರ್ದೇಶಕರು ಅಥವಾ ನಿಗಮದ ಆಯುಕ್ತರು ಅಥವಾ ಪೌರ ನಿಗಮ, ಪುರಸಭೆ ಅಥವಾ ಪೌರ ಪರಿಷತ್ತಿನ ಯಾವೊಬ್ಬ ಅಧಿಕಾರಿಯು, ತಾನು ಅಗತ್ಯಪಡಿಸಬಹುದಾದ ಅಂಥ ವೆಚ್ಚದ ಯಾವುದೇ ಸ್ವೀಕೃತಿಗೆ ಸಂಬಂಧಿಸಿದ ಯಾವುದೇ ಮಾಹಿತಿಯನ್ನು ಆತನಿಗೆ ಒದಗಿಸತಕ್ಕದ್ದು.

(6) ನಗರ ಭೂ ಸಾರಿಗೆ ನಿರ್ದೇಶಕರು ನಿಧಿಯ ನಿರ್ವಹಣೆಯ ವಾರ್ಷಿಕ ವರದಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ವರದಿಯನ್ನು ರಾಜ್ಯ ವಿಧಾನಮಂಡಲ ಪ್ರತಿಯೊಂದು ಸದನದ ಮುಂದೆ ಮಂಡಿಸಲು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಲೆಕ್ಕಪರಿಶೋಧನಾ ವರದಿ ಮತ್ತು ಇದಕ್ಕೆ ಸಂಬಂಧಿಸಿದ ಅನುಸರಣೆಯನ್ನು ಸಹ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಮಂಡಿಸತಕ್ಕದ್ದು."

**3. 1964ರ ಕರ್ನಾಟಕ ಅಧಿನಿಯಮ 22ರ ತಿದ್ದುಪಡಿ.–** ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 ರಲ್ಲಿ (1964ರ ಕರ್ನಾಟಕ ಅಧಿನಿಯಮ 22) 94ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"94ಎ. ನಗರ ಸಾರಿಗೆ ಉಪಕರವನ್ನು ವಿಧಿಸುವುದು.–** (1) ಈ ಅಧಿನಿಯಮದ 94ನೇ ಪ್ರಕರಣದಡಿಯಲ್ಲಿ ಸಂಗ್ರಹಿಸಿದ ಸ್ವತ್ತು ತೆರಿಗೆಯ ಮೇಲೆ ಶೇಕಡ ಎರಡಕ್ಕಿಂತ ಹೆಚ್ಚಿರದ ಅಂಥ ದರಗಳಲ್ಲಿ ನಗರ ಸಾರಿಗೆ ಉಪಕರವನ್ನು ವಿಧಿಸತಕ್ಕದ್ದು ಮತ್ತು ಸಂಗ್ರಹಿಸತಕ್ಕದ್ದು ಮತ್ತು ಇದನ್ನು ಹತ್ತಿರದ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು.

(2) ಈ ಪ್ರಕರಣದಲ್ಲಿ ಇರುವುದಾವುದೂ, ಯಾವುದೇ ಇತರ ಅಧಿನಿಯಮದ ಉಪಬಂಧಗಳ ಜಾರಿಗೆ ಬಾಧಕವನ್ನು ಉಂಟು ಮಾಡತಕ್ಕದ್ದಲ್ಲ ಮತ್ತು ಈ ಅಧಿನಿಯಮದಡಿಯಲ್ಲಿ ನಗರ ಸಾರಿಗೆ ಉಪಕರವನ್ನು ವಿಧಿಸುವುದು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಅಡಿಯಲ್ಲಿ ವಿಧಿಸಬಹುದಾದ ಯಾವುದೇ ಇತರ ಸುಂಕ ಅಥವಾ ಉಪಕರವು ಹೆಚ್ಚುವರಿಯಾಗಿರತಕ್ಕದ್ದು ಮತ್ತು ಬದಲಾಗಿರತಕ್ಕದ್ದಲ್ಲ.

(3) ನಗರ ಸಾರಿಗೆ ಉಪಕರದ ರೂಪದಲ್ಲಿ ಸಂಗ್ರಹಿಸಿದ ಎಲ್ಲಾ ಹಣವನ್ನು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ 14) 149ಎ ಪ್ರಕರಣದ ಅಡಿಯಲ್ಲಿ ಸೃಜಿಸಿದ ನಗರ ಸಾರಿಗೆ ನಿಧಿಗೆ ಜಮೆ ಮಾಡತಕ್ಕದ್ದು.

(4) ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ, ಉಪಕರದ ಸಂಗ್ರಹಣೆ, ನಗರ ಸಾರಿಗೆ ನಿಧಿಯ ನಿರ್ವಹಣೆ ಮತ್ತು ಬಳಕೆಯ ವಿಧಾನವನ್ನು ನಿಯಮಿಸಲು ನಿಯಮಗಳನ್ನು ರಚಿಸಬಹುದು."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ರಾಜ್ಯ ಸರ್ಕಾರವು, ಆಯವ್ಯಯ ಬೆಂಬಲದೊಂದಿಗೆ ನಗರ ಸಾರಿಗೆಯಲ್ಲಿ ಹಣಕಾಸು ಉಪಕ್ರಮಗಳು ಮತ್ತು ಸಾಮರ್ಥ್ಯ ನಿರ್ಮಾಣಕ್ಕೆ ರಾಜ್ಯ ನಗರ ಸಾರಿಗೆ ನಿಧಿಯನ್ನು ರೂಪಿಸಿದೆ ಮತ್ತು ಸ್ವತ್ತು ತೆರಿಗೆ ಮೇಲಿನ ಉಪಕರದ ಮೂಲಕ ಮೊಬಲಗನ್ನು ಹೆಚ್ಚಿಸಬೇಕಾಗಿದೆ. ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 ಮತ್ತು ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ರ ಅಸ್ತಿತ್ವದಲ್ಲಿರುವ ಉಪಬಂಧಗಳು ನಗರ ಸಾರಿಗೆಗೆ ಸಂಬಂಧಿಸಿದಂತೆ ಉಪಕರದ ಸಂಗ್ರಹಣೆಗಾಗಿ ಅವಕಾಶವನ್ನು ಒದಗಿಸುವುದಿಲ್ಲ. ಆದ್ದರಿಂದ ಸಮರ್ಥ ನಗರ ಸಾರಿಗೆ ವ್ಯವಸ್ಥೆಗಳು ಮತ್ತು ಮೂಲ ಸೌಕರ್ಯಗಳನ್ನು ಉತ್ತಮಪಡಿಸುವ ಉದ್ದೇಶಕ್ಕಾಗಿ, ನಿಯಮಿಸಲಾದ ದರಗಳಲ್ಲಿ ಉಪಕರದ ಸಂಗ್ರಹಣೆಗಾಗಿ ಉಪಬಂಧ ಕಲ್ಪಿಸಲು ಸದರಿ ಅಧಿನಿಯಮಗಳನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ. ಹಾಗೆ ವಿಧಿಸಿದ ಉಪಕರವು ರಾಜ್ಯ ನಗರ ಸಾರಿಗೆ ನಿಧಿಯ ಒಂದು ಭಾಗವಾಗತಕ್ಕದ್ದು. ಕೆಲವು ಇತರ ಪ್ರಾಸಂಗಿಕ ಮತ್ತು ಆನುಷಂಗಿಕ ಉಪಬಂಧಗಳನ್ನು ಸಹ ಪ್ರಸ್ತಾಪಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ರಾಜ್ಯ ಹಣಕಾಸು ಸಮಿತಿಯ ಅನುದಾನಗಳಿಂದ 10 ಕೋಟಿ ರೂಪಾಯಿಗಳ ವಂತಿಗೆಯೊಂದಿಗೆ ರಾಜ್ಯ ನಗರ ಸಾರಿಗೆ ನಿಧಿಯನ್ನು ಸ್ಥಾಪಿಸಬೇಕಾಗುವುದು.

ಪ್ರಾರಂಭಿಕ ವರ್ಷಗಳಲ್ಲಿ ನಿಧಿಗೆ,-

| | | |
|---|---|---|
| (i) | ಮೋಟಾರು ವಾಹನಗಳ ತೆರಿಗೆಯ ಮೇಲೆ ಉಪಕರ | ಪ್ರತಿ ವರ್ಷಕ್ಕೆ 20 ಕೋಟಿ ರೂಪಾಯಿಗಳು |
| (ii) | ನಗರ ಸ್ಥಳೀಯ ಸಂಸ್ಥೆಗಳು ಸಂಗ್ರಹಿಸಿದ ಸ್ವತ್ತು ತೆರಿಗೆಯ ಮೇಲೆ ಶೇಕಡಾ 2 ರಷ್ಟು ಉಪಕರ | ಪ್ರತಿ ವರ್ಷಕ್ಕೆ 20 ಕೋಟಿ ರೂಪಾಯಿಗಳು |
| (iii) | ಕರ್ನಾಟಕ ಸರ್ಕಾರದ ಆಯವ್ಯಯದ ಬೆಂಬಲ | ಪ್ರತಿ ವರ್ಷಕ್ಕೆ 20 ಕೋಟಿ ರೂಪಾಯಿಗಳು |

-ಈ ಇತರ ಮೂಲಗಳಿಂದ ಹಣಕಾಸನ್ನು ಒದಗಿಸಲಾಗುವುದು.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತ ಜ್ಞಾಪನ ಪತ್ರ

2ನೇ ಖಂಡದಲ್ಲಿ, ಸೇರಿಸಲು ಉದ್ದೇಶಿಸಲಾದ ಈ ಮುಂದಿನ ಪ್ರಕರಣಗಳಲ್ಲಿ,-

**103ಸಿ ಪ್ರಕರಣದಲ್ಲಿ** (4)ನೇ ಉಪಪ್ರಕರಣವು, ನಗರ ಸಾರಿಗೆ ನಿಧಿಯ ಸಂಗ್ರಹಣೆ, ನಿರ್ವಹಣೆ ಮತ್ತು ಬಳಕೆಯ ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**149ಎ ಪ್ರಕರಣದಲ್ಲಿ**

(i) (2)ನೇ ಉಪಪ್ರಕರಣದ (iv)ನೇ ಖಂಡವು, ನಗರ ಸಾರಿಗೆ ನಿಧಿಯನ್ನು ಬಳಸಿಕೊಳ್ಳುವ ಉದ್ದೇಶವನ್ನು ನಿಯಮಿಸುವ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(ii) (4)ನೇ ಉಪಪ್ರಕರಣವು ನಗರ ಸಾರಿಗೆ ನಿಧಿಯಿಂದ ಬರುವ ಎಲ್ಲಾ ಸ್ವೀಕೃತಿಗಳು ಮತ್ತು ವೆಚ್ಚದ ಲೆಕ್ಕಪತ್ರಗಳನ್ನು ಇಡುವ ರೀತಿಯ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**3ನೇ ಖಂಡದಲ್ಲಿ** ಸೇರಿಸಲು ಉದ್ದೇಶಿಸಲಾದ 94ಎ ಪ್ರಕರಣದಲ್ಲಿ,

**94ಎ ಪ್ರಕರಣದಲ್ಲಿ** (4)ನೇ ಉಪಪ್ರಕರಣವು, ಉಪಕರದ ಸಂಗ್ರಹಣೆ, ನಗರ ಸಾರಿಗೆ ನಿಧಿಯ ನಿರ್ವಹಣೆ ಮತ್ತು ಬಳಕೆಯ ರೀತಿಯ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಮೇಲಿನ ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಎಸ್. ಸುರೇಶ್ ಕುಮಾರ್**
ನಗರಾಭಿವೃದ್ಧಿ, ಕಾನೂನು ಮತ್ತು ಸಂಸದೀಯ
ವ್ಯವಹಾರಗಳ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ (1977ರ ಕರ್ನಾಟಕ ಅಧಿನಿಯಮ 14) ಉದ್ಧೃತ ಭಾಗ**

**xx xx xx**

**103ಬಿ. ಮೂಲ ಸೌಲಭ್ಯ ಮತ್ತು ಘನ ತ್ಯಾಜ್ಯ ವಸ್ತುಗಳ ನಿರ್ವಹಣೆಯ ಮೇಲೆ ಉಪಕರ ವಿಧಿಸುವಿಕೆ.–** (1) ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ರ (1957 ರ ಕರ್ನಾಟಕ ಅಧಿನಿಯಮ 35) 19ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದಾಗ್ಯೂ, ನಿಗಮವು, ಆ ಅಧಿನಿಯಮದ ಅಡಿಯಲ್ಲಿ ವಿಧಿಸಿದ ತೆರಿಗೆಗೆ ಹೆಚ್ಚಿಗೆಯಾಗಿ, ನಗರದ ಒಳಗೆ ರಸ್ತೆಯ ಮೇಲೆ ಸಂಚಾರಕ್ಕಾಗಿ ಬಳಸಲು ಸೂಕ್ತವಾದ ಪ್ರತಿಯೊಂದು ಮೋಟಾರು ವಾಹನದ ಮೇಲೆ ನಿಯಮಿಸಬಹುದಾದಂತೆ ಪ್ರತಿ ವರ್ಷಕ್ಕೆ ಐದು ನೂರು ರೂಪಾಯಿಗಳಿಗೆ ಮೀರದ ಅಂಥ ದರದಲ್ಲಿ, ಮೂಲ ಸೌಲಭ್ಯ ಉಪಕರವನ್ನು ವಿಧಿಸಬಹುದು ಮತ್ತು ಸಂಗ್ರಹಿಸಬಹುದು ಮತ್ತು ಮೋಟಾರು ವಾಹನಗಳ ಬೇರೆ ಬೇರೆ ವರ್ಗಗಳಿಗೆ ಬೇರೆ ಬೇರೆ ದರಗಳನ್ನು ನಿಯಮಿಸಬಹುದು.

**ವಿವರಣೆ:** ಈ ಪ್ರಕರಣದ ಉದ್ದೇಶಕ್ಕಾಗಿ **"ಮೋಟಾರು ವಾಹನ"** ಎಂಬುದು ಮೋಟಾರು ವಾಹನಗಳ ಆಧಿನಿಯಮ, 1988ರಲ್ಲಿ (1988ರ ಕೇಂದ್ರ ಅಧಿನಿಯಮ 59) ಕೊಡಲಾದ ಅರ್ಥವನ್ನೇ ಹೊಂದಿರತಕ್ಕದ್ದು.

**(2)** ನಿಗಮವು, ಘನತ್ಯಾಜ್ಯ ವಸ್ತುಗಳ ಸಂಗ್ರಹಣೆ, ಸಾಗಣೆ ಮತ್ತು ವಿಲೆ ಮಾಡುವ ಉದ್ದೇಶಕ್ಕಾಗಿ 103ನೇ ಪ್ರಕರಣದ ಅಡಿಯಲ್ಲಿ ವಿಧಿಸಿದ ಸ್ವತ್ತು ತೆರಿಗೆಗೆ ಹೆಚ್ಚಿಗೆಯಾಗಿ, ಪ್ರತಿ ತಿಂಗಳಿಗೆ ಒಂದು ಸಾವಿರ ರೂಪಾಯಿಗಳಿಗೆ ಮೀರದ ಅಂಥ ದರದಲ್ಲಿ ನಿಯಮಿಸಬಹುದಾದಂತೆ, ನಗರದಲ್ಲಿಯ ಕಟ್ಟಡಗಳ ಅಥವಾ ಭೂಮಿಗಳ ಅಥವಾ ಅವೆರಡರ ಪ್ರತಿಯೊಬ್ಬ ಮಾಲೀಕನ ಅಥವಾ ಅಧಿಭೋಗದಾರನ ಮೇಲೆ ಘನತ್ಯಾಜ್ಯ ವಸ್ತುಗಳ ಸಂಗ್ರಹಣಾ ಉಪಕರವನ್ನು ವಿಧಿಸಬಹುದು ಮತ್ತು ಬೇರೆ ಬೇರೆ ವರ್ಗದ ಭೂಮಿಗಳ ಅಥವಾ ಕಟ್ಟಡಗಳ ಅಥವಾ ಬೇರೆ ಬೇರೆ ಪ್ರದೇಶಗಳ ಸಂಬಂಧದಲ್ಲಿ ಬೇರೆ ಬೇರೆ ವರ್ಗಗಳಿಗೆ ಬೇರೆ ಬೇರೆ ದರಗಳನ್ನು ನಿಯಮಿಸಬಹುದು.

**ವಿವರಣೆ:** ಈ ಪ್ರಕರಣದ ಉದ್ದೇಶಗಳಿಗಾಗಿ, ಘನತ್ಯಾಜ್ಯ ವಸ್ತು ಎಂಬುದು, ಕೊಳೆ, ಹೊಲಸುಪದಾರ್ಥ, ಕಸ ಗ್ರಾಮಸಾರ, ಕಾರ್ಖಾನೆಯ ಕಲ್ಮಷ, ಕಾರ್ಖಾನೆ ಹಿಪ್ಪೆ, ಆಸ್ಪತ್ರೆಗಳ ತ್ಯಾಜ್ಯ ವಸ್ತುಗಳು ಮತ್ತು ಸಾರ್ವಜನಿಕ ಆರೋಗ್ಯಕ್ಕೆ ಹಾನಿಯುಂಟು ಮಾಡುವ ಯಾವುವೇ ಇತರ ತ್ಯಾಜ್ಯ ವಸ್ತುಗಳನ್ನು ಒಳಗೊಳ್ಳುತ್ತದೆ.

(3) (1) ಮತ್ತು (2)ನೇ ಉಪಪ್ರಕರಣಗಳ ಅಡಿಯಲ್ಲಿ ವಿಧಿಸಿದ ಉಪಕರವನ್ನು ನಿಯಮಿಸಬಹುದಾದ ವಿಧಾನದಲ್ಲಿ ನಿರ್ಧರಣೆ ಮಾಡತಕ್ಕದ್ದು ಮತ್ತು ಸಂಗ್ರಹಿಸತಕ್ಕದ್ದು.

(4) 61ಎ, 62 ಮತ್ತು 444ನೇ ಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದಾಗ್ಯೂ, ಈ ಪ್ರಕರಣದ ಅಡಿಯಲ್ಲಿ ಉಪಕರ ವಿಧಿಸುವಿಕೆ ಮತ್ತು ನಿರ್ಧರಣೆಯಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಅಂಥ ಉಪಕರದ ನಿರ್ಧರಣೆಯ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ನಿಯಮಿಸಲಾದ ಪ್ರಾಧಿಕಾರಕ್ಕೆ ಅಪೀಲನ್ನು ಸಲ್ಲಿಸಬಹುದು, ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

(5) ನಿಯಮಿಸಲಾದ ಪ್ರಾಧಿಕಾರವು, ಅರ್ಜಿದಾರನಿಗೆ ಮತ್ತು ನಿಗಮಕ್ಕೆ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡಿದ ನಂತರ ತಾನು ಸೂಕ್ತವೆಂದು ಭಾವಿಸಬಹುದಾದಂತೆ ಅಂಥ ಆದೇಶವನ್ನು ಹೊರಡಿಸಬಹುದು.

(6) ಉಪವಿಧಿಗಳಲ್ಲಿ ಉಪಬಂಧಿಸಬಹುದಾದಂತೆ ಅಂಥ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು, ಈ ಪ್ರಕರಣದ ಅಡಿಯಲ್ಲಿ ನಿಗಮಕ್ಕೆ ಸಂದಾಯಮಾಡತಕ್ಕ ಉಪಕರವನ್ನು, ನಿಗಮವು ಈ ಸಂಬಂಧದಲ್ಲಿ ಗೊತ್ತುಪಡಿಸಬಹುದಾದ ಅಂಥ ಏಜೆನ್ಸಿಯ ಮೂಲಕ ಸಂಗ್ರಹಿಸಬಹುದು.

**xx xx xx**

**149. ನಿಗಮದ ನಿಧಿ.–** ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಮೂಲಕ ಅಥವಾ ಮೇರೆಗೆ ನಿಗಮವು ಅಥವಾ ನಿಗಮದ ಪರವಾಗಿ ಸ್ವೀಕರಿಸಿದ ಎಲ್ಲಾ ಹಣಗಳು ಅಥವಾ ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ನಿಗಮಕ್ಕೆ ಸಂದಾಯವಾದ ಅಥವಾ

ಅದು ವಿಧಿಸಿದ ಎಲ್ಲಾ ತೆರಿಗೆಗಳು, ಜಕಾತಿಗಳು ಮತ್ತು ಇತರ ಪೊಗದಿಗಳು, ಜುಲ್ಮಾನೆಗಳು, ಫೀಜುಗಳು, ದಂಡಗಳು, ನಿಗಮವು ಮಾರಾಟ ಮಾಡಿದ ಜಮೀನು ಅಥವಾ ಇತರ ಸ್ವತ್ತಿನ ಎಲ್ಲ ಉತ್ಪನ್ನ ಮತ್ತು ಅದರ ಜಮೀನು ಅಥವಾ ಸ್ವತ್ತಿನಿಂದ ಕೂಡಿಬರುವ ಎಲ್ಲಾ ಬಾಡಿಗೆಗಳು ಮತ್ತು ಸರ್ಕಾರದಿಂದ ಅಥವಾ ಖಾಸಗೀ ವ್ಯಕ್ತಿಗಳಿಂದ ಅಥವಾ ಅನ್ಯಥಾ ದಾನಗಳಿಂದ ಅಥವಾ ವರ್ಗಾವಣೆಗಳ ಮೂಲಕ ಕೂಡಿಬರುವ ಎಲ್ಲಾ ಇತರ ಬಡ್ಡಿ, ಲಾಭಗಳು ಮತ್ತು ಇತರ ಹಣಗಳು ನಿಗಮದ ನಿಧಿಯಾಗಿರತಕ್ಕದ್ದು ಮತ್ತು ಅದನ್ನು ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳು ಮತ್ತು ವಿನಿಯಮಗಳು ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಉಪಬಂಧಗಳಿಗೆ ಅನುಸಾರವಾಗಿ ಧಾರಣ ಮಾಡತಕ್ಕದ್ದು, ವಿನಿಯೋಗಿಸತಕ್ಕದ್ದು ಮತ್ತು ವಿಲೆ ಮಾಡತಕ್ಕದ್ದು.

**xx** **xx** **xx**

**ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 22) ಉದ್ಧೃತ ಭಾಗ**

**xx** **xx** **xx**

**94. ವಿಧಿಸಬಹುದಾದ ತೆರಿಗೆಗಳು.–** (1) ಮುನಿಸಿಪಲ್ ಕೌನ್ಸಿಲ್ ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೆ ಒಳಪಟ್ಟು,–

(ಎ) **xx** **xx** **xx**

(ಬಿ) ಈ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಿದ ದರಗಳಿಗೆ ಮೀರದಂತೆ, ಈ ಕೆಳಕಂಡ ಯಾವುದೇ ಒಂದು ಅಥವಾ ಹೆಚ್ಚು ತೆರಿಗೆಗಳನ್ನು ವಿಧಿಸಬಹುದು:–

(i) ಪೌರಸಭೆಯೊಳಗೆ ಇರುವ ಕಟ್ಟಡಗಳು ಅಥವಾ ಭೂಮಿಗಳು ಅಥವಾ ಎರಡರ ಮೇಲಿನ ತೆರಿಗೆ (ಇಲ್ಲಿ ಇನ್ನು ಮುಂದೆ ಸ್ವತ್ತು ತೆರಿಗೆ ಎಂದು ಉಲ್ಲೇಖಿಸಲಾಗಿದೆ);

(ii) **xx** **xx** **xx**

(xii) ಹೆಚ್ಚಿನ ಸ್ಟ್ಯಾಂಪ್ ಸುಂಕದ ಸ್ವರೂಪದಲ್ಲಿ ಸ್ಥಿರ ಸ್ವತ್ತಿನ ವರ್ಗಾವಣೆ ಮೇಲಿನ ಸುಂಕ;

(xiii) ಯಾವುದೇ ಭೂಮಿ, ಕಟ್ಟಡ, ಗೋಡೆ, ಪ್ರಕಟಣ ಪಟ, ಚೌಕಟ್ಟು, ಕಂಬ ಅಥವಾ ರಚನೆಯ ಮೇಲೆ ಅಥವಾ ಅದರ ಮೇಲ್ಭಾಗದಲ್ಲಿ ಅಥವಾ ಯಾವುದೇ ವಾಹನದ ಮೇಲೆ ಅಥವಾ ಅದರಲ್ಲಿ ನಿಲ್ಲಿಸಿದ, ಪ್ರದರ್ಶಿಸಿದ ಜೋಡಿಸಿದ ಅಥವಾ ಉಳಿಸಿಕೊಂಡ, ಅಥವಾ ಸಾರ್ವಜನಿಕ ಬೀದಿ ಅಥವಾ ಸಾರ್ವಜನಿಕ ಸ್ಥಳದಿಂದ ಯಾವುದೇ ರೀತಿಯಲ್ಲಾಗಲಿ ಸಾರ್ವಜನಿಕರ ದೃಷ್ಟಿಗೆ ಪ್ರದರ್ಶಿಸಿದ ಚಲನಚಿತ್ರ ಸಾಧನಗಳ ಮೂಲಕ ಪ್ರದರ್ಶಿಸಿದ ಯಾವುದೇ ಜಾಹೀರಾತನ್ನು ಒಳಗೊಂಡು ಜಾಹೀರಾತುಗಳು (ವರ್ತಮಾನ ಪತ್ರಿಕೆಗಳಲ್ಲಿ ಹೊರತುಪಡಿಸಿ) ಮೇಲಿನ ತೆರಿಗೆ;

ವಿವರಣೆ(i):– ಈ ಉಪ–ಖಂಡದಲ್ಲಿ " ರಚನೆ " ಎಂಬ ಪದವು, ಜಾಹೀರಾತು ಮಾಧ್ಯಮವಾಗಿ ಉಪಯೋಗಿಸಿದ, ಚಕ್ರಗಳ ಮೇಲಿನ ಯಾವುದೇ ಚಲಿಸುವ ಫಲಕವನ್ನು ಒಳಗೊಳ್ಳುತ್ತದೆ;

ವಿವರಣೆ(ii):– ಈ ಉಪ–ಖಂಡದ ಉದ್ದೇಶಕ್ಕಾಗಿ ' ಸಾರ್ವಜನಿಕ ಸ್ಥಳ ' ಎಂದರೆ ಯಾವುದೇ ಸಾರ್ವಜನಿಕ ಉಪಯೋಗ ಮತ್ತು ಅನುಭೋಗಕ್ಕೆ ಮುಕ್ತವಾಗಿರುವ, ಅದನ್ನು ಸಾರ್ವಜನಿಕರು ವಾಸ್ತವವಾಗಿ ಉಪಯೋಗಿಸುತ್ತಿರಲಿ ಅಥವಾ ಅನುಭೋಗಿಸುತ್ತಿರಲಿ ಅಥವಾ ಇಲ್ಲದಿರಲಿ, ಅಂಥ ಯಾವುದೇ ಸ್ಥಳ;

ವಿವರಣೆ(iii):– ಈ ಉಪ–ಖಂಡದಲ್ಲಿ 'ಜಾಹೀರಾತು' ಎಂಬ ಪದಕ್ಕೆ ಜಾಹೀರಾತು, ಪ್ರಕಟಣೆ ಅಥವಾ ನಿರ್ದೇಶನದ ಸ್ವರೂಪದಲ್ಲಿ ಮತ್ತು ಆ ಉದ್ದೇಶಕ್ಕಾಗಿ ಸಂಪೂರ್ಣವಾಗಿ ಅಥವಾ ಭಾಗಶಃ ಬಳಸಿದ, ದೀಪಗಳಿಂದ ಅಲಂಕರಿಸಿದ ಅಥವಾ ಅಲಂಕರಿಸಿಲ್ಲದ ಯಾವುದೇ ಪದ, ಅಕ್ಷರ, ಮಾದರಿ, ಸಂಕೇತ, ಪ್ರಕಟಣ ಪತ್ರ, ನೋಟೀಸು ಸಾಧನ ಅಥವಾ ಪ್ರದರ್ಶಕ ಎಂದರ್ಥ:

**xx** **xx** **xx**

(1–ಎ) ಈ ಮುಂದಿನ ಕಟ್ಟಡಗಳು ಮತ್ತು ಖಾಲಿ ಭೂಮಿಗಳನ್ನು ಸ್ವತ್ತು ತೆರಿಗೆಯಿಂದ ವಿನಾಯಿತಿಗೊಳಿಸತಕ್ಕದ್ದು, ಎಂದರೆ:–

(ಎ) ಸಾರ್ವಜನಿಕ ಪೂಜಾ ಸ್ಥಳವಾಗಿ ತೆಗೆದಿರಿಸಿದ ಮತ್ತು ಹಾಗೆ ವಾಸ್ತವಿಕವಾಗಿ ಬಳಸಲಾಗುತ್ತಿರುವ ಅಥವಾ ಯಾವುದೇ ಇತರ ಉದ್ದೇಶಗಳಿಗಾಗಿ ಉಪಯೋಗಿಸದೇ ಇರುವ ಸ್ಥಳ;

(ಬಿ) ಉಪಯೋಗಿಸಿದ್ದಕ್ಕಾಗಿ ಬಾಡಿಗೆಯನ್ನು ವಿಧಿಸದ ಛತ್ರಗಳು ಹಾಗೂ ಉಪಯೋಗಿಸಿದ್ದಕ್ಕಾಗಿ ವಿಧಿಸಲಾದ ಬಾಡಿಗೆಯನ್ನು ಧರ್ಮಾರ್ಥ ಉದ್ದೇಶಕ್ಕಾಗಿ ಮಾತ್ರ ಬಳಸುವ ಛತ್ರಗಳು;

(ಸಿ) ನಿರ್ಗತಿಕರಿಗೆ ಅಥವಾ ಪ್ರಾಣಿಗಳಿಗೆ ಆಶ್ರಯ ನೀಡುವ ಧರ್ಮಾರ್ಥ ಉದ್ದೇಶಕ್ಕಾಗಿ ಬಳಸುವ ಸ್ಥಳಗಳು ಮತ್ತು ಅನಾಥಾಶ್ರಮಗಳು, ಕಿವುಡರು ಮತ್ತು ಮೂಕರಿಗಾಗಿ ಇರುವ ನಿಲಯಗಳು ಹಾಗೂ ಶಾಲೆಗಳು, ವೃದ್ಧರು ಮತ್ತು ಪತಿತ ಮಹಿಳೆಯರಿಗಾಗಿನ ಆಶ್ರಯತಾಣಗಳು ಮತ್ತು ರಾಜ್ಯ ಸರ್ಕಾರದಿಂದ ಅಂಗೀಕೃತವಾದ ಸಂಪೂರ್ಣವಾಗಿ ಜನೋಪಕಾರಿ ಉದ್ದೇಶದಿಂದ ನಡೆಸುತ್ತಿರುವ ಅಂತಹವೇ ಸಂಸ್ಥೆಗಳು;

(ಡಿ) ವಾಸ ಗೃಹಗಳು ಅಥವಾ ಸಾರ್ವಜನಿಕ ಕಚೇರಿಗಳಿಗಾಗಿ ಬಳಸದ ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳ ಮತ್ತು ಅವಶೇಷಗಳ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ 7) ಹಾಗೂ ಪ್ರಾಚೀನ ಸ್ಮಾರಕ ಮತ್ತು ಪುರಾತತ್ವ ಸ್ಥಳಗಳು ಮತ್ತು ಅವಶೇಷಗಳ ಅಧಿನಿಯಮ, 1958ರ (1958ರ ಕೇಂದ್ರ ಅಧಿನಿಯಮ 24)ರ ಅಡಿಯಲ್ಲಿ ರಕ್ಷಿತವಾದಂಥ ಪ್ರಾಚೀನ ಸ್ಮಾರಕಗಳು ಅಥವಾ ಅದರ ಭಾಗಗಳು;

(ಇ) ಧರ್ಮಾರ್ಥ ಆಸ್ಪತ್ರೆಗಳು ಮತ್ತು ಔಷಧಾಲಯಗಳು, ಆದರೆ ಅವುಗಳಿಗೆ ಹೊಂದಿಕೊಂಡಿರುವ ವಾಸದ ಗೃಹಗಳನ್ನು ಒಳಗೊಳ್ಳುವುದಿಲ್ಲ;

(ಎಫ್) ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಬಹುದಾದಂಥ ರೈಲ್ವೆ ಆಡಳಿತವು ನಿರ್ವಹಿಸುತ್ತಿರುವ ಆಸ್ಪತ್ರೆಗಳು ಹಾಗೂ ಔಷಧಾಲಯಗಳು, ಆದರೆ ಅವುಗಳಿಗೆ ಹೊಂದಿಕೊಂಡಿರುವ ವಾಸಗೃಹಗಳನ್ನು ಒಳಗೊಳ್ಳುವುದಿಲ್ಲ;

(ಜಿ) ಪೌರಸಭೆಯ ಆಯುಕ್ತ ಅಥವಾ ಮುಖ್ಯ ಅಧಿಕಾರಿಯು ಪ್ರಕಟಿಸಿದ ಪಟ್ಟಿಯಲ್ಲಿ ಸೇರಿಸಿರುವ ಸ್ಮಶಾನ ಮತ್ತು ದಹನ ಭೂಮಿ;

(ಎಚ್) ಉಚಿತ ಮನೋರಂಜನಾ ಉದ್ದೇಶಗಳಿಗಾಗಿ ಮೀಸಲಿಟ್ಟಿರುವ ಸರ್ಕಾರಿ ಭೂಮಿ ಮತ್ತು ಸರ್ಕಾರವು ಅಧಿಸೂಚಿಸಬಹುದಾದಂಥ, ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ಯಾವುದೇ ಆದಾಯ ದೊರಕದಂಥ ಇತರ ಸರ್ಕಾರಿ ಭೂಮಿ;

(ಐ) (i) ಲಾಭಕ್ಕಾಗಿ ಸ್ಥಾಪಿಸದಿರುವ ಅಥವಾ ನಡೆಸದಿರುವ ವಿದ್ಯಾರ್ಥಿನಿಲಯಗಳಿಗಾಗಿ;

(ii) ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಿಂದ ಶೈಕ್ಷಣಿಕ ಉದ್ದೇಶಕ್ಕಾಗಿ,

– ಮಾತ್ರವೇ ಬಳಸುತ್ತಿರುವ ಕಟ್ಟಡಗಳು ಅಥವಾ ಖಾಲಿ ಭೂಮಿಗಳು.

(ಜೆ) ಸರ್ಕಾರಿ ಉದ್ದೇಶಗಳಿಗಾಗಿ ಬಳಸುವ ಮತ್ತು ವಾಸದ ಮತ್ತು ವಾಣಿಜ್ಯ ಉದ್ದೇಶಗಳಿಗಾಗಿ ಬಳಸದ ಮತ್ತು ಬಳಸುವ ಉದ್ದೇಶವನ್ನು ಹೊಂದಿಲ್ಲದ, ಕೇಂದ್ರ ಸರ್ಕಾರಕ್ಕೆ ಅಥವಾ ಯಾವುದೇ ರಾಜ್ಯ ಸರ್ಕಾರಕ್ಕೆ ಸೇರಿದ ಕಟ್ಟಡಗಳು ಅಥವಾ ಖಾಲಿ ಭೂಮಿಗಳು;

(ಕೆ) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಕರ್ನಾಟಕ ಗೃಹ ಮಂಡಳಿ, ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ, 1987ರ ಅಡಿಯಲ್ಲಿ ರಚಿತವಾದ ನಗರಾಭಿವೃದ್ಧಿ ಪ್ರಾಧಿಕಾರಗಳು ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರಗಳಿಗೆ ಸೇರಿದ, ಆದರೆ ಯಾವುದೇ ಮಂಜೂರಾತಿ, ಹಂಚಿಕೆ ಅಥವಾ ಗುತ್ತಿಗೆಗೆ ಅನುಗುಣವಾಗಿ ಯಾವೊಬ್ಬ ವ್ಯಕ್ತಿಗೆ ಸ್ವಾಧೀನತೆಯನ್ನು ವಹಿಸಿಕೊಟ್ಟಿರದ ಕಟ್ಟಡಗಳು ಅಥವಾ ಖಾಲಿ ಭೂಮಿಗಳು;

(ಎಲ್) ರಾಜ್ಯ ಸರ್ಕಾರದ ರಾಜಸ್ವ ಲೆಕ್ಕಪತ್ರದಲ್ಲಿ ಕೃಷಿಯ ಉದ್ದೇಶಕ್ಕಾಗಿ ಬಳಸಲಾಗುವ ಭೂಮಿಯೆಂದು ನೊಂದಾಯಿತವಾದ ಮತ್ತು ವಾಸ್ತವವಾಗಿ ಬೆಳೆಯನ್ನು ಬೆಳೆಯುವ ಉದ್ದೇಶಕ್ಕಾಗಿ ಬಳಸುತ್ತಿರುವ ಭೂಮಿ;

ಪರಂತು, (ಎ), (ಸಿ) ಮತ್ತು (ಇ) ಖಂಡಗಳಲ್ಲಿ ಒಳಗೊಂಡಿರುವುದಾವುದೂ, ಸದರಿ ಖಂಡಗಳಲ್ಲಿ ಉಲ್ಲೇಖಿಸಿದ ಉದ್ದೇಶಗಳಿಗಾಗಿ ಯಾವುದೇ ಕಟ್ಟಡ ಅಥವಾ ಖಾಲಿ ಭೂಮಿಯನ್ನು ಬಳಸುವ ವ್ಯಕ್ತಿ ಅಥವಾ ವ್ಯಕ್ತಿಗಳು ಬಾಡಿಗೆಯನ್ನು ಸಂದಾಯ ಮಾಡುತ್ತಿದ್ದರೆ ಆ ಕಟ್ಟಡ ಅಥವಾ ಖಾಲಿ ಭೂಮಿಗೆ ಸ್ವತ್ತು ತೆರಿಗೆಯಿಂದ ವಿನಾಯಿತಿ ನೀಡುವುದಾಗಿ ಭಾವಿಸತಕ್ಕದ್ದಲ್ಲ;

ಮತ್ತು ಪರಂತು (ಜೆ) ಖಂಡದ ಉದ್ದೇಶಗಳಿಗಾಗಿ, ಸರ್ಕಾರ ಅಥವಾ ಸರ್ಕಾರದಿಂದ ಕ್ರಮಬದ್ಧವಾಗಿ ಪ್ರಾಧಿಕೃತನಾದ ಯಾವೊಬ್ಬ ಅಧಿಕಾರಿಯು ಯಾವುದೇ ಕಟ್ಟಡ ಅಥವಾ ಭೂಮಿಯನ್ನು ರಾಜ್ಯ ಸರ್ಕಾರದ ಉದ್ದೇಶಗಳಿಗಾಗಿ ಬಳಸಲಾಗುತ್ತಿದೆಯೆಂದು ಮತ್ತು ವಾಸದ ಅಥವಾ ವಾಣಿಜ್ಯ ಉದ್ದೇಶಗಳಿಗಾಗಿ ಬಳಸುತ್ತಿಲ್ಲವೆಂದು ಮತ್ತು ಬಳಸುವ ಉದ್ದೇಶವನ್ನು ಹೊಂದಿಲ್ಲವೆಂದು ನೀಡಿದ ಪ್ರಮಾಣ ಪತ್ರವು; ಪೌರಸಭಾ ಪರಿಷತ್ತನ್ನು ಬದ್ಧವಾಗಿಸತಕ್ಕದ್ದು.

(1–ಬಿ) ಯಾವುದೇ ಜಾಹೀರಾತು,–

(ಎ) ಯಾವುದೇ ಕಟ್ಟಡದಲ್ಲಿ ಕೈಗೊಳ್ಳಲಾಗುವ ವ್ಯಾಪಾರ, ವೃತ್ತಿ ಅಥವಾ ವ್ಯವಹಾರಕ್ಕೆ ಸಂಬಂಧಪಟ್ಟಿದ್ದು ಅದನ್ನು ಆ ಕಟ್ಟಡದ ಕಿಟಕಿಯಲ್ಲಿ ಪ್ರದಶಿಸುತ್ತಿದ್ದರೆ, ಅಥವಾ

(ಬಿ) ಅಂಥ ಜಾಹೀರಾತನ್ನು ಯಾವ ಭೂಮಿಯ ಮೇಲೆ ಅಥವಾ ಕಟ್ಟಡದ ಮೇಲೆ ಪ್ರದರ್ಶಿಸಲಾಗುತ್ತಿದೆಯೋ ಆ ಭೂಮಿ ಅಥವಾ ಕಟ್ಟಡದೊಳಗೆ ನಡೆಸಲಾಗುತ್ತಿರುವ ವ್ಯಾಪಾರ, ವೃತ್ತಿ ಅಥವಾ ವ್ಯವಹಾರಕ್ಕೆ ಅಥವಾ ಅಂಥ ಭೂಮಿ ಅಥವಾ ಕಟ್ಟಡದ ಅಥವಾ ಅದರಲ್ಲಿನ ಯಾವುದೇ ಸ್ವತ್ತಿನ ಮಾರಾಟಕ್ಕೆ ಅಥವಾ ಅದನ್ನು ಬಾಡಿಗೆಗೆ ಕೊಡುವುದಕ್ಕೆ ಅಥವಾ ಅದರ ಮಾರಾಟಕ್ಕೆ ಅಥವಾ ಅದರಲ್ಲಿ ಅಥವಾ ಅದರ ಮೇಲೆ ಅಥವಾ ಅದರೊಳಗೆ ನಡೆಯಲಿರುವ ಮನೋರಂಜನೆ ಅಥವಾ ಸಭೆಗೆ ಸಂಬಂಧಪಟ್ಟದ್ದರೆ; ಅಥವಾ

(ಸಿ) ಆ ಜಾಹೀರಾತನ್ನು ಯಾವ ಭೂಮಿಯ ಮೇಲೆ ಅಥವಾ ಕಟ್ಟಡದ ಮೇಲೆ ಪ್ರದರ್ಶಿಸಲಾಗುವುದೋ ಆ ಭೂಮಿಯ ಅಥವಾ ಕಟ್ಟಡದ ಹೆಸರಿಗೆ ಅಥವಾ ಅಂಥ ಭೂಮಿಯ ಅಥವಾ ಕಟ್ಟಡದ ಮಾಲೀಕ ಅಥವಾ ಅಧಿಭೋಗದಾರನ ಹೆಸರಿಗೆ ಸಂಬಂಧಿಸಿದ್ದರೆ; ಅಥವಾ

(ಡಿ) ರೈಲ್ವೆ ಆಡಳಿತ ವ್ಯವಹಾರಕ್ಕೆ ಸಂಬಂಧಪಟ್ಟಿದ್ದರೆ ಮತ್ತು ಯಾವುದೇ ರೈಲ್ವೆ ನಿಲ್ದಾಣದೊಳಗೆ ಪ್ರದರ್ಶಿಸಿದ್ದರೆ ಅಥವಾ ರೈಲ್ವೆ ಆಡಳಿತದ ಯಾವುದೇ ಗೋಡೆ ಅಥವಾ ಇತರ ಸ್ವತ್ತಿನ ಮೇಲೆ ಪ್ರದರ್ಶಿಸಿದರೆ; ಅಥವಾ

(ಇ) ರಾಜ್ಯ ಸರ್ಕಾರದ ಯಾವುದೇ ಚಟುವಟಿಕೆಗೆ ಸಂಬಂಧಿಸಿದ್ದರೆ ಅಥವಾ

(ಎಫ್) ಯಾವುದೇ ಸಾರ್ವಜನಿಕ ಸಭೆಗೆ ಸಂಬಂಧಿಸಿದ್ದರೆ,

– ಅಂಥ ಯಾವುದೇ ಜಾಹೀರಾತಿನ ಮೇಲೆ ತೆರಿಗೆಯನ್ನು ವಿಧಿಸತಕ್ಕದ್ದಲ್ಲ.

(2) (1–ಎ) ನೇ ಉಪ–ಪ್ರಕರಣದ ಅಡಿಯಲ್ಲಿ ಮಂಜೂರು ಮಾಡಿದ ವಿನಾಯಿತಿಗಳು ಏನೇ ಇದ್ದರೂ ನಾಗರಿಕ ಸೌಲಭ್ಯಗಳನ್ನು ಒದಗಿಸಿದ್ದಕ್ಕಾಗಿ ಮತ್ತು ಸಾಮಾನ್ಯ ಅಥವಾ ವಿಶೇಷ ಸೇವೆಗಳನ್ನು ಸಲ್ಲಿಸಿದ್ದಕ್ಕಾಗಿ ಸೇವಾ ಶುಲ್ಕಗಳನ್ನು ನಿಯಮಿಸಬಹುದಾದಂತೆ ಅಂಥ ದರಗಳಲ್ಲಿ ಸಂಗ್ರಹಿಸುವುದಕ್ಕೆ ಮುನಿಸಿಪಲ್ ಕೌನ್ಸಿಲ್‌ಗೆ ಅವಕಾಶವಿರತಕ್ಕದ್ದು.

(3) (1)ನೇ ಉಪ–ಪ್ರಕರಣದ ನಿರ್ದಿಷ್ಟಪಡಿಸಿದ ತೆರಿಗೆಗಳನ್ನು, ಈ ಅಧಿನಿಯಮದ ಉಪಬಂಧಗಳ ಮತ್ತು 323ನೇ ಪ್ರಕರಣದ ಮೇರೆಗೆ ಸರ್ಕಾರವು ರಚಿಸಿದ ನಿಯಮಗಳ ಅನುಸಾರವಾಗಿ ನಿರ್ಧರಿಸತಕ್ಕುದು, ವಿಧಿಸತಕ್ಕುದು ಮತ್ತು ಸಂಗ್ರಹಿಸತಕ್ಕದ್ದು.

**xx** **xx** **xx**

## KARNATAKA LEGISLATIVE ASSEMBLY

### THIRTEENTH LEGISLATIVE ASSEMBLY

### THIRTEENTH SESSION

## THE KARNATAKA MUNICIPAL CORPORATIONS AND CERTAIN OTHER LAW (SECOND AMENDMENT) BILL, 2012

### (L.A. Bill No. 16 of 2012)

A Bill further to amend the Karnataka Municipal Corporations Act, 1976 and the Karnataka Municipalities Act, 1964.

Whereas it is expedient further to amend the Karnataka Municipal Corporations Act, 1976 (Karnataka Act 14 of 1977) and the Karnataka Municipalities Act, 1964 (Karnataka Act 22 of 1964) for the purposes hereinafter appearing;

Be it enacted by the Karnataka State Legislature in the sixty third year of the Republic of India, as follows:-

**1. Short title and commencement.-** (1) This Act may be called the Karnataka Municipal Corporations and Certain Other Law (Second Amendment) Act, 2012.

(2) It shall come into force from such date as the State Government may, by notification, appoint and different dates may be appointed for different provisions of this Act.

**2. Amendment of the Karnataka Act 14 of 1977.-** In the Karnataka Municipal Corporations Act, 1976 (Karnataka Act 14 of 1977),-

(i) after section 103B, the following shall be inserted, namely:-

"**103C. Levy of Urban Transport Cess.-** (1) There shall be levied and collected an Urban Transport Cess at such rates not more than two percent on the property tax levied and collected under section 103 or 108A of this Act and which shall be rounded off to nearest rupee.

(2) Nothing in this section shall affect the operation of the provisions of any other Act and the levy of Urban Transport Cess under this Act is in addition to, and not in lieu of, any other tax or cess that may be levied under any other law for the time being in force.

